


# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine

Vol-16 Issue No. 06 June - 2019 ₹ 10/-





Sri Vajubai Vala, Hon'ble Governor of Karnataka and Patron BS&G Presented Chaturtha Charan, Heerak Pankh & Rajya Puraskar Award Certificates to Cubs-Bulbuls Scouts-Guides Rovers & Rangers on 25th June 2019 at Rajbhavan. Sri G.T. Devegowda Hon'ble Minister for Higher Education & Vice President, BS&G, Karnataka, Sri P.G.R. Sindia Sri Kondajji B. Shanmukhappa, Smt. Tejaswini Anantha Kumar, Smt. Bharati Chandrashekhar Sri M.A Khalid are seen.



Sri P.G.R. Sindia and Office Bearers of BS&G called on Hon'ble Chief Justice of Karnataka High Court Sri Abhay Srinivas Okaji on 6th June 2019 and briefed him about the Programmes and Activities of the Movement. Sri Kondajji B. Shanmukhappa Sri K. Gangappa Gowda Sri Mohan Kumar Kondajji, MLC and Sri M.A. Chellaiah were present.




ಜೂನ್ 21ರಂದು ಉಡುಪಿ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ಜರುಗಿದ ಅಂತಾರಾಷ್ಟ್ರೀಯ ಯೋಗ ದಿನಾಚರಣೆ ಉದ್ಘಾಟನೆ ಹಾಗೂ 2019–20ರ ವಾರ್ಷಿಕ ಕಾರ್ಯಕ್ರಮಗಳ ಯೋಜನೆಗಳ ಪುಸ್ತಕ ಬಿಡುಗಡೆಯನ್ನು ಪರಮಪೂಜ್ಯ ಸ್ವಾಮೀಜಿ ಶ್ರೀಶ್ರೀಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು, ಪರ್ಯಾಯ ಶ್ರೀ ಪಲಿಮಾರು ಮಠ, ಶ್ರೀ ಕೃಷ್ಣ ಮಠ, ಉಡುಪಿ ಇವರ ಸಾನಿಧ್ಯದಲ್ಲಿ ಹಮ್ಮಿಕೊಳ್ಳಲಾಗಿತ್ತು. ಚಿತ್ರದಲ್ಲಿ ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಜ್ಯೋತಿ ಜೆ. ಪೈ, ಶ್ರೀ ಐ.ಕೆ. ಜಯಚಂದ್ರರಾವ್, ಜಿಲ್ಲಾ ಕಾರ್ಯದರ್ಶಿ, ಡಾ. ಜಯರಾಮ್ ಶೆಟ್ಟಿಗಾರ್, ಸಹಕಾರ್ಯದರ್ಶಿ ಮತ್ತು ಯೋಗ ಗುರುಗಳಾದ ಶ್ರೀ ಗಣೇಶ್ ಭಟ್ ಹಾಗೂ ಇತರರು ಭಾಗವಹಿಸಿದ್ದರು.



ಜೂನ್ 21ರಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಕಛೇರಿ ಡಾ. ರಾಜ್‌ಕುಮಾರ್ ಗಾಜಿನ ಮನೆಯಲ್ಲಿ ಭಾರತ್ ಸ್ಕೌಟ್ಸ್–ಗೈಡ್ಸ್ ಬಿಬಿಎಂಪಿ ಜಿಲ್ಲಾ ಸಂಸ್ಥೆಯಿಂದ ಏರ್ಪಡಿಸಿದ "ಯೋಗ ದಿನಾಚರಣೆ"ಯ ಕಾರ್ಯಕ್ರಮವನ್ನು ಉದ್ಘಾಟಿಸಿ ಯೋಗದಲ್ಲಿ ಪಾಲ್ಗೊಂಡಿರುವ ಮೇಯರ್ ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನ್, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀ ಎನ್. ಮಂಜುನಾಥ್ ಪ್ರಸಾದ್, ಆಯುಕ್ತರು ಬಿಬಿಎಂಪಿ ಹಾಗೂ ಸ್ಕೌಟ್ಸ್–ಗೈಡ್ಸ್‌ಗಳು ಮತ್ತು ಸ್ಕೌಟರ್–ಗೈಡರ್‌ಗಳು ಭಾಗವಹಿಸಿದ್ದರು.





**A View of the Scouts-Guides, Scouters-Guiders, Parents, Wellwishers and Invitees present on the occassion of Rajyapuraskar Rally held on 25th June 2019 at Rajbhavan, Bengaluru.**




ಕರ್ನಾಟಕ
ಸ್ಕೌಟ್ ಮತ್ತು ಗೈಡ್
ಮಾಸಿಕ
ವಾರ್ತಾಪತ್ರಿಕೆ
KARNATAKA
Scout & Guide
MONTHLY NEWS MAGAZINE



ದೂ: 080-2226 0017, 2226 7470
ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, karnataka

ಸಂಚಿಕೆಯ ವಾರ್ಷಿಕ ಚಂದಾ ರೂ. 100/-
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39, ಅರಮನೆ ರಸ್ತೆ, ಬೆಂಗಳೂರು-560 001 ಇಲ್ಲಿಗೆ ಕಳುಹಿಸಲು ಕೋರಿದೆ.

## ಪರಿವಿಡಿ

# ರಾಜ್ಯ ಮುಖ್ಯ ಆಯುಕ್ತರ ನುಡಿ



ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೇ,
ಸಸ್ನೇಹ ನಮಸ್ಕಾರಗಳು

**ತಿಂಗಳ ಧ್ಯೇಯ ವಾಕ್ಯ: "ಸ್ಕೌಟ್ ಪ್ರಕೃತಿ ರಕ್ಷಕ"**



ತಡವಾಗಿ ಆರಂಭವಾಗಿರುವ ಮುಂಗಾರು ಮಳೆಯು ನಮಗೆ ಮತ್ತೆ ಅಪಾಯದ ಸೂಚನೆಯನ್ನು ನೀಡಿದೆ. ಜಗತ್ತಿನ ಪರಿಸರಕ್ಕೆ, ಜೀವಜಾಲಕ್ಕೆ ನೀರು ಅತ್ಯಂತ ಅವಶ್ಯಕವಾದುದು. ಅದನ್ನು ಕಾಪಾಡುವುದು ಸರ್ಕಾರವೂ ಸೇರಿದಂತೆ, ನಮ್ಮೆಲ್ಲರ ಜವಾಬ್ದಾರಿಯಾಗಿದೆ. ನೀರಿನ ತೀವ್ರ ಸಂಕಷ್ಟದಿಂದ ನಾಗರೀಕರು ದೊಡ್ಡ ನಗರಗಳನ್ನು ತೊರೆಯುತ್ತಿರುವ ಸುದ್ದಿಯು ಬರುತ್ತಿದೆ. ತಕ್ಷಣದಲ್ಲಿ ನೀರಿನ ಸಂರಕ್ಷಣೆಯ ಕಾರ್ಯಾಚರಣೆಯನ್ನು ಸಮರೋಪಾದಿಯಲ್ಲಿ ಆರಂಭಿಸದಿದ್ದರೆ ಭವಿಷ್ಯದ ಬರವು ಭಯಾನಕವಾಗಿರುತ್ತದೆ.

ಪ್ರತಿ ಸಂಚಿಕೆಯಲ್ಲಿ ನಾನು ನೀರಿನ ಸಂರಕ್ಷಣೆಯಲ್ಲಿ ಸ್ಕೌಟ್ಸ್ ಸಂಸ್ಥೆಯ ಸಕಾರಾತ್ಮಕ ಪಾತ್ರದ ಬಗ್ಗೆ ಬರೆಯುತ್ತಿದ್ದೇನೆ. ಪುನ:- ಪುನ: ಈ ಬಗ್ಗೆ ಜ್ಞಾಪಿಸುವುದು, ಮನನ ಮಾಡುವುದು ಅಗತ್ಯವೆಂದು ಪ್ರಸಕ್ತ ಹಿನ್ನೆಲೆಯಲ್ಲಿ ನನಗೆ ಅನ್ನಿಸುತ್ತಿದೆ. ಜಿಲ್ಲೆ ಮತ್ತು ಸ್ಥಳೀಯ ಸಂಸ್ಥೆಗಳು ಸಾಧಿಸಬಹುದಾದ ಕ್ರಿಯಾಯೋಜನೆಗಳನ್ನು ರೂಪಿಸಿ, ನೀರಿನ ಸಂರಕ್ಷಣೆಯ ಕಾರ್ಯವನ್ನು ಕೈಗೆತ್ತಿಕೊಳ್ಳಬೇಕೆಂದು ಕೋರುತ್ತೇನೆ. ಅಗತ್ಯ ಸಂದರ್ಭಗಳಲ್ಲಿ ರಾಜ್ಯ ಸಂಸ್ಥೆಯೂ ನಿಮ್ಮ ಜೊತೆಗೂಡುವುದು.

ಬೇಸಿಗೆಯ ರಜೆಯ ನಂತರ ಶಾಲಾ-ಕಾಲೇಜುಗಳು ಆರಂಭವಾಗಿವೆ. ಪದವಿ ಮತ್ತು ಉನ್ನತ ಶಿಕ್ಷಣಕ್ಕೆ ದಾಖಲಾತಿಗಳು ಇನ್ನೂ ನಡೆಯುತ್ತಿವೆ. ಶೈಕ್ಷಣಿಕ ವರ್ಷದ ಆರಂಭದಲ್ಲಿಯೇ ನೀವುಗಳು ಗಂಭೀರವಾಗಿ ಅಧ್ಯಯನದಲ್ಲಿ ತೊಡಗಿಕೊಳ್ಳಬೇಕು. ವಿಳಂಬ ಪ್ರವೃತ್ತಿಯನ್ನು ಅನುಸರಿಸಬಾರದು. ಅಂದಿನ ಪಾಠಗಳನ್ನು ಅಂದೇ ಅಧ್ಯಯನ ಮಾಡಿದರೆ ನಿಮಗೆ ಪಠ್ಯೇತರ ಚಟುವಟಿಕೆಗಳಿಗೂ ಸಾಕಷ್ಟು ಸಮಯ ಸಿಗುತ್ತದೆ. ಅಧ್ಯಯನದ ವೇಳಾಪಟ್ಟಿಯನ್ನು ತಯಾರು ಮಾಡಿಕೊಳ್ಳಲು ಪೋಷಕರ, ಅಧ್ಯಾಪಕರ ಸಹಾಯವನ್ನು ಪಡೆದುಕೊಳ್ಳಿ.





ಇದೇ ತಿಂಗಳ 25ರಂದು ರಾಜಭವನದಲ್ಲಿ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್, ಗೈಡ್ಸ್, ರೋವರ್ಸ್, ರೇಂಜರ್ಸ್‌ಗಳಿಗೆ ಚತುರ್ಥ ಚರಣ್, ಹೀರಕ್ ಪಂಕ್ ಮತ್ತು ರಾಜ್ಯಪುರಸ್ಕಾರ ಪ್ರಮಾಣಪತ್ರಗಳ ಪ್ರದಾನ ಸಮಾರಂಭವು ನಡೆಯಿತು. ಕರ್ನಾಟಕದ ಗೌರವಾನ್ವಿತ ರಾಜ್ಯಪಾಲರು ಮತ್ತು ನಮ್ಮ ಸಂಸ್ಥೆಯ ಪೋಷಕರಾದ ಸನ್ಮಾನ್ಯ ಶ್ರೀ ವಾಜುಬಾಯಿ ವಾಲರವರು ಪ್ರಮಾಣಪತ್ರಗಳನ್ನು ವಿತರಿಸಿ ಸ್ಕೌಟಿಂಗ್-ಗೈಡಿಂಗ್ ಬಗ್ಗೆ ಪ್ರಶಂಸೆ ವ್ಯಕ್ತಪಡಿಸಿದರು. ಕರ್ನಾಟಕ ಸರ್ಕಾರದ ಉನ್ನತ ಶಿಕ್ಷಣ ಸಚಿವರಾದ ಶ್ರೀ ಜಿ. ಟಿ. ದೇವೇಗೌಡ ಅವರು ಕಾರ್ಯಕ್ರಮದಲ್ಲಿ ಭಾಗವಹಿಸಿ ನಮ್ಮ ಸಂಸ್ಥೆಗೆ ಎಲ್ಲಾ ರೀತಿಯ ಸಹಕಾರ ನೀಡುವುದಾಗಿ ಹೇಳಿದರು. ರಾಜ್ಯ ಪುರಸ್ಕಾರವನ್ನು ಪಡೆದ ಮಕ್ಕಳೆಲ್ಲರಿಗೂ ನನ್ನ ಹೃತ್ಪೂರ್ವಕ ಶುಭಾಶಯಗಳು. ಇವರ ಸಾಧನೆಯು ಬೇರೆ ಮಕ್ಕಳಿಗೆ ಮಾರ್ಗದರ್ಶನವಾಗಲಿ ಎಂದು ಹಾರೈಸಿದರು.

ನೀವುಗಳು ಸ್ಕೌಟ್-ಗೈಡ್‌ಗಳಾಗಿ ಸಂಸ್ಥೆಯಲ್ಲಿ ಕ್ರಿಯಾಶೀಲರಾಗಿರುವುದು ನನಗೆ ಸಂತೋಷದ ವಿಷಯ. ಅಧ್ಯಯನದ ಜೊತೆಗೆ ನಿಮ್ಮ ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಗೆ ಸ್ಕೌಟ್ ಚಟುವಟಿಕೆ ಸಹಾಯ ಮಾಡುತ್ತದೆ.

ನಿಮ್ಮ ಜೊತೆಗೆ, ನಿಮ್ಮ ಗೆಳೆಯರನ್ನೂ ಸ್ಕೌಟ್ಸ್-ಗೈಡ್ಸ್ ಚಳವಳಿಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸಿರಿ. ಈ ವರ್ಷ ನಮ್ಮ ಗಣತಿಯು ಗುರಿ ಮೀರಿ ಬೆಳೆಯಬೇಕು. ಈ ಸಾಧನೆಯನ್ನು ಮಾಡಲು ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆಗಳು ಗಂಭೀರವಾಗಿ ತೊಡಗಿಕೊಳ್ಳಬೇಕೆಂದು ನನ್ನ ಆಶಯ.

ರಾಜ್ಯ ಸಂಸ್ಥೆಯಿಂದ ಪದಾಧಿಕಾರಿಗಳ ತಂಡಗಳು ಮುಂದಿನ ದಿನಗಳಲ್ಲಿ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಭೇಟಿ ಮಾಡಲಿವೆ. 2018-19ರ ಕಾರ್ಯಚಟುವಟಿಕೆಗಳ ಬಗ್ಗೆ ಜಿಲ್ಲಾ/ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳೊಂದಿಗೆ ಚರ್ಚಿಸಿ, 2019-20ನೇ ಸಾಲಿನಲ್ಲಿ ಆಯೋಜಿಸಿರುವ ಕಾರ್ಯಕ್ರಮಗಳು, ತರಬೇತಿಗಳು ಮೊದಲಾದ ವಿಷಯಗಳ ಬಗ್ಗೆ ಸಮಗ್ರ ಚರ್ಚೆಯನ್ನು ಮಾಡಲಿವೆ. ಈ ಪರಸ್ಪರ ಮಾತುಕತೆಯು ಜಿಲ್ಲಾ/ ಸ್ಥಳೀಯ ಸಂಸ್ಥೆಗಳ ಚಟುವಟಿಕೆಗಳನ್ನು ಸಬಲಗೊಳಿಸುವುದರ ಜೊತೆಗೆ ಒಟ್ಟಾರೆಯಾಗಿ ಸಂಸ್ಥೆಯ ಕಾರ್ಯಕ್ರಮಗಳ ಬಗ್ಗೆ ಚಿತ್ರಣವನ್ನು ನೀಡಲಿದೆ. ಇದರ ಜೊತೆಗೆ ಈ ವರ್ಷ ರಾಜ್ಯಮಟ್ಟದಲ್ಲಿ ನಡೆಯಲಿರುವ ಹಲವಾರು ಕಾರ್ಯಕ್ರಮಗಳನ್ನು ನಿರ್ವಹಿಸಲು ಪ್ರತ್ಯೇಕ ಕಾರ್ಯತಂಡಗಳನ್ನು ರಚಿಸಲಾಗಿದೆ. ಶೀಘ್ರವೇ ಈ ತಂಡಗಳ ಸಭೆಯನ್ನು ಕರೆಯಲಾಗುವುದು.

ಜೂನ್ 5ರಂದು "ವಿಶ್ವಪರಿಸರ ದಿನವನ್ನು" ಆಚರಿಸಿಲಾಯಿತು. ಪರಿಸರ ಜಾಗೃತಿ ಚಟುವಟಿಕೆಗಳಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯು ಮುಂಚೂಣಿಯಲ್ಲಿದೆ. ನಿರಂತರವಾದ ಈ ಜಾಗೃತಿ ಕಾರ್ಯಕ್ರಮಗಳು ಸಮಾಜದ ಗಮನವನ್ನು ಸೆಳೆದಿದೆಯೆಂಬುದು ಸಂತೋಷದಾಯಕ ವಿಚಾರ. ಪರಿಸರ ದಿನಾಚರಣೆಯ ಬಗ್ಗೆ ನಡೆದ ಹಲವಾರು ಕಾರ್ಯಕ್ರಮಗಳು ಈ ಸಂಚಿಕೆಯಲ್ಲಿ ಪ್ರಕಟವಾಗಿದೆ.



ಜೂನ್ 21ರಂದು "ವಿಶ್ವಯೋಗದಿನ". ಭಾರತದ ಪ್ರಯತ್ನದಿಂದಾಗಿ ವಿಶ್ವಸಂಸ್ಥೆಯು ಜೂನ್ 21ನ್ನು "ವಿಶ್ವಯೋಗ ದಿನ"ವನ್ನಾಗಿ ಆಚರಿಸಲು ಒಪ್ಪಿಗೆಯನ್ನು ನೀಡಿದೆ. ವಿಶ್ವಯೋಗ ದಿನಾಚರಣೆಯು ಭಾರತದಾದ್ಯಂತ ಅತ್ಯಂತ ಸಂಭ್ರಮದಿಂದ ನಡೆಯಿತು. ಈ ಚಟುವಟಿಕೆಗಳಲ್ಲಿ ನಾವೂಕೂಡ ಸಕ್ರಿಯವಾಗಿ ತೊಡಗಿಕೊಂಡಿದ್ದೇವೆ.



ಯೋಗ ತರಬೇತಿಯನ್ನು ನೀಡುವುದರಲ್ಲಿ ನಮ್ಮ ಸಂಸ್ಥೆಯು ಒಂದು ಹೆಜ್ಜೆ ಮುಂದಿರಿಸಿದೆ. ಇನ್ನು ಮುಂದೆ ಪ್ರತಿ ಬುಧವಾರ, ಗುರುವಾರ ಮತ್ತು ಶುಕ್ರವಾರ ಸಂಜೆ 5.30 ರಿಂದ 6.30ರ ತನಕ ಯೋಗ ತರಬೇತಿ ಶಿಬಿರಗಳನ್ನು ನಮ್ಮ ಕೇಂದ್ರ ಕಛೇರಿಯ ಆವರಣದಲ್ಲಿ ನಡೆಸಲಾಗುವುದು. ಸಾಮಾನ್ಯ ಯೋಗಾಸನಗಳು, ಪ್ರಾಣಾಯಾಮ ಮತ್ತು ಧ್ಯಾನವನ್ನು ಇಲ್ಲಿ ಹೇಳಿಕೊಡಲಾಗುತ್ತದೆ. ಈ ಸೌಲಭ್ಯವನ್ನು ಬೆಂಗಳೂರಿನ ನಾಗರೀಕರು ಪಡೆದುಕೊಳ್ಳಬೇಕೆಂದು ನಾನು ಕೋರುತ್ತೇನೆ. ಇಂತಹ ಪ್ರಯತ್ನಗಳನ್ನು ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆಗಳು ಮಾಡಲು ಪ್ರಯತ್ನಿಸಬೇಕೆಂದು ಬಯಸುತ್ತೇನೆ.

ಜುಲೈ 22 ರಿಂದ 2 ಆಗಸ್ಟ್ 2019 ರವರೆಗೆ ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ 24ನೆಯ ವಿಶ್ವಸ್ಕೌಟ್ ಜಾಂಬೂರಿಯು ವೆಸ್ಟ್‌ವರ್ಜೀನಿಯಾದಲ್ಲಿ ನಡೆಯಲಿದೆ. ಪ್ರಪಂಚದ ಅನೇಕ ರಾಷ್ಟ್ರಗಳಿಂದ ಒಂದು ಲಕ್ಷಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ಸ್ಕೌಟರ್ಸ್-ಗೈಡರ್ಸ್, ಶಿಕ್ಷಕ-ಶಿಕ್ಷಕಿಯರು ಮತ್ತು ಪದಾಧಿಕಾರಿಗಳು ಭಾಗವಹಿಸುತ್ತಿದ್ದಾರೆ. ಪ್ರತಿ ನಾಲ್ಕು ವರ್ಷಕ್ಕೊಮ್ಮೆ ನಡೆಯುವ ವಿಶ್ವಜಾಂಬೂರಿಯಲ್ಲಿ ಕರ್ನಾಟಕದಿಂದ ಒಟ್ಟು 91 ಜನರು ಭಾಗವಹಿಸುತ್ತಾರೆ. ಅದರಲ್ಲಿ 25 ಸ್ಕೌಟ್ಸ್, 20 ಗೈಡ್ಸ್, 46 ಸ್ಕೌಟರ್ಸ್-ಗೈಡರ್ಸ್, ಶಿಕ್ಷಕ-ಶಿಕ್ಷಕಿಯರು ಹಾಗೂ ಸಿಬ್ಬಂದಿ ವರ್ಗದವರು ಇರುತ್ತಾರೆ. ನಮ್ಮ ತಂಡವು ಕರ್ನಾಟಕದ ಇತಿಹಾಸ, ಕಲೆ, ಸಂಸ್ಕೃತಿ, ಸಾಹಿತ್ಯ, ಮುಂತಾದ ಐತಿಹ್ಯಗಳನ್ನು ಜಾಂಬೂರಿಯಲ್ಲಿ ಪ್ರದರ್ಶಿಸಲಿದ್ದಾರೆ. 24ನೆಯ ವಿಶ್ವ ಜಾಂಬೂರಿಯಲ್ಲಿ ಭಾಗವಹಿಸಲು ಆಯ್ಕೆಯಾಗಿರುವ ತಂಡದ ಸದಸ್ಯರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಅವರು ನಮ್ಮ ಸಂಸ್ಥೆಯ ರಾಯಭಾರಿಗಳಾಗಿದ್ದಾರೆ. ತಂಡವು ರೂಪಿಸುವ ಎಲ್ಲಾ ಕಾರ್ಯಕ್ರಮಗಳು ಯಶಸ್ವಿಯಾಗಲಿ ಮತ್ತು ಕ್ಷೇಮವಾಗಿ ಹಿಂತಿರುಗಲಿ ಎಂದು ಆಶಿಸುತ್ತೇನೆ.



2019–20ರ ವಾರ್ಷಿಕ ಕಾರ್ಯಕ್ರಮಗಳ ಯೋಜನೆಯ ಕೈಪಿಡಿ ನಿಮ್ಮ ಬಳಿಯಲ್ಲಿದೆ. 2019–20ರ ಶೈಕ್ಷಣಿಕ ವರ್ಷದಲ್ಲಿಯೂ ನಾವು ಸಂಸ್ಥೆಯಿಂದ ಮುಂದುವರೆದ ಕಾರ್ಯಕ್ರಮಗಳ ಜೊತೆಗೆ ಈ ಸಾಲಿನಲ್ಲಿ ಹಮ್ಮಿಕೊಳ್ಳಬಹುದಾದ ಮತ್ತಷ್ಟು ವಿಭಿನ್ನ ಕಾರ್ಯಕ್ರಮಗಳು ಮತ್ತು ಚಟುವಟಿಕೆಗಳನ್ನೊಳಗೊಂಡ "2019–20ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ" (Annual Programme –Plan 2019-20) ವಿವರಗಳು ಅಲ್ಲಿದೆ. ಸಂಸ್ಥೆಯ ಹಿರಿಯ ನಾಯಕರುಗಳು, ಎಲ್ಲಾ ಜಿಲ್ಲಾ/ ಸ್ಥಳೀಯ ಸಂಸ್ಥೆಗಳ ಪದಾಧಿಕಾರಿಗಳು, ವಿಶ್ವವಿದ್ಯಾಲಯಗಳು ಮತ್ತು ಶಿಕ್ಷಣ ಇಲಾಖೆಗಳ ಅಧಿಕಾರಿಗಳೊಡನೆ ಚರ್ಚಿಸಿ, ಅವರೆಲ್ಲರೂ ನೀಡಿರುವ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ಸಂಸ್ಥೆಯ ತರಬೇತಿ ಪದ್ಧತಿಯನ್ನು ಸುಧಾರಿಸುವ ಜೊತೆಗೆ ರಾಜ್ಯದಲ್ಲಿ ಚಳವಳಿಯ ಬೆಳವಣಿಗೆಗೆ ಪೂರಕವಾಗುವಂತೆ ಈ ಸಾಲಿನ ಯೋಜನೆಯನ್ನು ಸಿದ್ಧಪಡಿಸಲಾಗಿದೆ.




ಈ ಪುಸ್ತಕದಲ್ಲಿ ಸೂಚಿಸಿರುವ ಕಾರ್ಯಕ್ರಮಗಳಿಗೆ ಅನುಗುಣವಾಗಿ 2019–20ನೇ ಸಾಲಿನಲ್ಲಿ ನಿಮ್ಮ ಜಿಲ್ಲೆಗಳಲ್ಲಿ / ಸ್ಥಳೀಯ ಸಂಸ್ಥೆಗಳಲ್ಲಿ ಚಟುವಟಿಕೆಗಳನ್ನು, ಕಾರ್ಯಕ್ರಮ ಮತ್ತು ತರಬೇತಿಗಳನ್ನು ಪೂರ್ವಭಾವಿಯಾಗಿ ಯೋಜಿಸಿ, ಯಶಸ್ವಿಗೊಳಿಸುವ ಮೂಲಕ, ನಿಮ್ಮ ಜಿಲ್ಲೆಗಳಲ್ಲಿ / ಸ್ಥಳೀಯ ಸಂಸ್ಥೆಗಳಲ್ಲಿ ಸ್ಕೌಟ್/ ಗೈಡ್ ಚಳವಳಿಯನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಬೆಳೆಸಲು ಹಾಗೂ ಈ ವರ್ಷದಲ್ಲಿ ನಿಮ್ಮ ಜಿಲ್ಲೆಯ/ ಸ್ಥಳೀಯ ಸಂಸ್ಥೆಗಳ ಗಣತಿಯನ್ನು, ಸ್ಕೌಟ್ಸ್/ ಗೈಡ್ಸ್‌ನ ಗುಣಾತ್ಮಕತೆಯನ್ನು ಮತ್ತಷ್ಟು ಹೆಚ್ಚಿಸಲು ಶ್ರಮಿಸುತ್ತೀರೆಂದು ನಂಬಿದ್ದೇನೆ.

ಬಹುವರ್ಣದಲ್ಲಿ ಮುದ್ರಿತವಾಗಿರುವ ಕೈಪಿಡಿಯು ಮನಸೆಳೆಯುತ್ತದೆ. ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಸಂದೇಶವನ್ನು ಒಳಗೊಂಡಿದೆ. ವಿಶೇಷವೆಂದರೆ ಪ್ರತಿ ತಿಂಗಳು ಆಯಾ ತಿಂಗಳ ಚಟುವಟಿಕೆಗಳಿಗೆ ಹೊಂದಿಕೊಂಡಂತೆ ಧ್ಯೇಯ ವಾಕ್ಯಗಳನ್ನು ರೂಪಿಸಲಾಗಿದೆ. ರಾಷ್ಟ್ರೀಯ ಸಂಸ್ಥೆಯ ಕಾರ್ಯಕ್ರಮಗಳನ್ನು ಕೈಪಿಡಿಯಲ್ಲಿ ಮುದ್ರಿಸಿದ್ದೇವೆ. ಸ್ಕೌಟ್ ಸಂಸ್ಥೆಯ ಬಗ್ಗೆ ಕರ್ನಾಟಕ ಸರ್ಕಾರವು ನೀಡಿರುವ ಮುಖ್ಯ ಸುತ್ತೋಲೆಗಳನ್ನೂ ಒಳಗೊಂಡಿದೆ. ಅಲ್ಲದೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಾರಿಗೊಳಿಸುತ್ತಿರುವ ಜಾಗತೀಕ ಯೋಜನೆಗಳ ಬಗ್ಗೆ ಕಿರುಟಿಪ್ಪಣಿಯನ್ನು ನೀಡಲಾಗಿದೆ. ತನ್ಮೂಲಕ "ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ" ಎಂಬ ಮಹಾತ್ಮಗಾಂಧಿಯವರ ಕನಸನ್ನು ನನಸು ಮಾಡಲು ಪ್ರಯತ್ನಿಸೋಣ.

ಕಳೆದ ಮಳೆಗಾಲದಲ್ಲಿ ಸುರಿದ ವಿಪರೀತ ಮಳೆಯಿಂದ ಕೊಡಗು ಜಿಲ್ಲೆಯಲ್ಲಿ ಪ್ರವಾಹ, ಭೂಕುಸಿತ, ಮೊದಲಾದ ಪ್ರಕೃತಿ ವಿಕೋಪಗಳಲ್ಲಿ ಬಹಳಷ್ಟು ನಾಗರಿಕರು ಸಂಕಷ್ಟಕ್ಕೊಳಗಾದರು. ಆ ಸಂದರ್ಭದಲ್ಲಿ ನಮ್ಮ ರೋವರ್ಸ್–ರೇಂಜರ್ಸ್‌ಗಳು ಅತ್ಯುತ್ತಮವಾದ ಸೇವೆಯನ್ನು ಸಲ್ಲಿಸಿದ್ದರು. ಈ ವರ್ಷ ಮುಂಜಾಗರೂಕ ಕ್ರಮಗಳನ್ನು ಕೈಗೊಳ್ಳಲು ಉದ್ದೇಶಿಸಿ ಕೊಡಗು ಜಿಲ್ಲಾಧಿಕಾರಿಗಳು ಕರೆದಿದ್ದ ಸಭೆಯಲ್ಲಿ ನಾನು ಭಾಗವಹಿಸಿದ್ದೆ. ಜೂನ್ 11, 12 ರಂದು ಶಿಕ್ಷಕ–ಶಿಕ್ಷಕಿಯರನ್ನು ಒಳಗೊಂಡಂತೆ 120 ರೋವರ್ಸ್ ರೇಂಜರ್ಸ್‌ಗಳಿಗೆ ತರಬೇತಿಯನ್ನು ಜಿಲ್ಲಾಡಳಿತವು ನೀಡಿದೆ. ಹಿಂದಿನ ವರ್ಷದ ಸಮಸ್ಯೆಯು ಪುನರಾವರ್ತನೆಯಾಗದಿರಲಿ. ಅಕಸ್ಮಾತ್ ಪ್ರವಾಹ ಭೀತಿ ಎದುರಾದರೆ ಸೇವೆಗೆ ನಾವು ಸಿದ್ಧರಿದ್ದೇವೆ. ಕರ್ನಾಟಕಕ್ಕೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ನೀಡಿರುವ ಈ ಸಂದೇಶವು ನನಗೆ ಬಹಳ ಹೆಮ್ಮೆಯನ್ನುಂಟು ಮಾಡುತ್ತಿದೆ.

ಜೂನ್ 4ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯನ್ನು ಕರ್ನಾಟಕದಲ್ಲಿ ಪ್ರಾರಂಭಿಸಲು ಕಾರಣಕರ್ತರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಜನ್ಮ ದಿನಾಚರಣೆ ಇತ್ತು. 1894ನೇ ಇಸವಿಯಲ್ಲಿ ತಮ್ಮ 10ನೇ ವಯಸ್ಸಿನಲ್ಲಿ ಪಟ್ಟಾಭಿಷಿಕ್ತರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು 1940ರ ವರೆಗೆ ರಾಜ್ಯಭಾರ ಮಾಡಿದರು. ಈ ಅವಧಿಯಲ್ಲಿ ಆಗಿನ ಮೈಸೂರು ಪ್ರಾಂತ್ಯವು ಸರ್ವತೋಮುಖ ಅಭಿವೃದ್ಧಿಯನ್ನು ಸಾಧಿಸಿತು. ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ, ಕನ್ನಡ ಸಾಹಿತ್ಯ ಪರಿಷತ್ತಿನ ಆರಂಭ, ಏಷ್ಯಾದಲ್ಲಿಯೇ ಪ್ರಥಮವಾದ ಶಿವನಸಮುದ್ರ ಜಲ ವಿದ್ಯುತ್ ಸ್ಥಾವರ, ಸರ್ಕಾರದ ನೌಕರಿಗಳಲ್ಲಿ ಮೀಸಲಾತಿ, ಪ್ರಜಾಪ್ರತಿನಿಧಿ ಸಭೆಯ ಸ್ಥಾಪನೆ, ಮುಂತಾದ ಪ್ರಗತಿಪರ ಕಾರ್ಯಕ್ರಮಗಳನ್ನು ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಜಾರಿಗೆ ತಂದರು. ಇವುಗಳ ಜೊತೆಗೆ ಮುಖ್ಯವಾಗಿ ಸ್ಕೌಟ್ ಸಂಸ್ಥೆಯನ್ನು 1917ನೇ ಇಸವಿಯಲ್ಲಿ ಪ್ರಾರಂಭಿಸಿ, ತಾವೇ ಪ್ರಧಾನ ಪೋಷಕರಾಗಿದ್ದರು. ಇಂದು ನಮ್ಮ ಸಂಸ್ಥೆಯು ಇಷ್ಟು ವಿಶಾಲವಾಗಿ ಬೆಳೆಯಲು ಅವರ ಕೊಡುಗೆಯು ಪ್ರಮುಖ ಕಾರಣವಾಗಿದೆ.



ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

(ಪಿ.ಜಿ.ಆರ್. ಸಿಂಧ್ಯ)

ರಾಜ್ಯ ಮುಖ್ಯ ಆಯುಕ್ತರು





# ಯೋಗ

ಗೊ.ರು. ಚನ್ನಬಸಪ್ಪ
ಗೌರವ ಅಧ್ಯಕ್ಷರು
ಪ್ರಕಟಣಾ ಸಮಿತಿ, ಭಾ.ಸ್ಕೌ&ಗೈ, ಕರ್ನಾಟಕ

ಮಾನವ ಸದಾ ಏನನ್ನಾದರೂ ಹುಡುಕುತ್ತಿರುತ್ತಾನೆ. ಯಾರೊಡನಾದರೂ ಸೆಣಸುತ್ತಿರುತ್ತಾನೆ. ಯಾವುದಕ್ಕಾದರೂ ಪರದಾಡುತ್ತಿರುತ್ತಾನೆ. ಇದೆಲ್ಲದರ ಅಂತಿಮ ಗುರಿ ಮನಸ್ಸಿನ ನೆಮ್ಮದಿ. ಮದುವೆಯಲ್ಲೋ, ಮಸಣದಲ್ಲೋ, ಜಾತ್ರೆಯಲ್ಲೋ ಯಾತ್ರೆಯಲ್ಲೋ, ಮನೆಯಲ್ಲೋ, ಬೀದಿಯಲ್ಲೋ ಮನಸ್ಸಿನ ಶಾಂತಿಯನ್ನು ಬಯಸುತ್ತಾನೆ.

ಹಸಿವಾದಾಗ ಊಟ ಮಾಡುವುದು, ಬಾಯಾರಿದಾಗ ನೀರು ಕುಡಿಯುವುದು, ಅನಿಸಿದಾಗ ಅಡ್ಡಾಡುವುದು, ಏನಾದರೂ ಕೆಲಸದಲ್ಲಿ ತೊಡಗುವುದು, ಬಿಡುವಾದಾಗ ವಿಶ್ರಾಂತಿ ಪಡೆಯುವುದು, ಬೇಸರವೆನಿಸಿದಾಗ ತಾನೇ ಹಾಡುವುದು, ರಾತ್ರಿ ಬಂದಾಗ ಮಲಗುವುದು, ಬೇಕೆನಿಸಿದಾಗ ನೋಡುವುದು, ಕೇಳುವುದು – ಇವೆಲ್ಲವೂ ಮನಸ್ಸಿನ ಶಾಂತಿಗಾಗಿಯೇ, ಏಕೆಂದರೆ, ಇವೆಲ್ಲ ಬೇಕೆನ್ನುವುದೇ ಮನಸ್ಸು.

ನಮ್ಮ ಅಸ್ತಿತ್ವವಿರುವುದು ಈ ಮನಸ್ಸಿನಿಂದಷ್ಟೇ ಅಲ್ಲ. ನಮಗೊಂದು ದೇಹವಿದೆ; ಇದನ್ನು ನಡೆಸುವ ಹೃದಯವಿದೆ. ಅಂದರೆ ದೇಹ, ಹೃದಯ ಮತ್ತು ಮನಸ್ಸು ಈ ಮೂರು ಜತನವಾಗಿರಬೇಕು; ಜಾಗೃತವಾಗಿರಬೇಕು; ದೃಢವಾಗಿರಬೇಕು; ಧೃತಿಯಿಂದಿರಬೇಕು. ಅವು ಜಡವಾದರೂ ಕೇಡು: ಬಡವಾದರೂ ಕೇಡು. ಈ ಮೂರು ಸ್ವಸ್ಥವಾಗಿರಬೇಕು; ಒಂದಕ್ಕೊಂದು ಹೊಂದಿಕೊಂಡಿರಬೇಕು. ಪರಸ್ಪರ ಸಾಮರಸ್ಯವಿರಬೇಕು. ಇಲ್ಲವಾದರೆ, ಅವು ಪರಸ್ಪರ ಘರ್ಷಣೆಗೆ ತೊಡಗಿ ಸೊರಗಿಬಿಡುತ್ತವೆ. ಶಕ್ತಿಯ ಜೊತೆಗೆ ಶಾಂತಿಯನ್ನು ಕಳೆದುಕೊಳ್ಳುತ್ತವೆ.

ಇದನ್ನರಿತೇ ದೇಹ, ಮನಸ್ಸು ಮತ್ತು ಹೃದಯಗಳ ಮಧ್ಯೆ ನಿಕಟವಾದ ಮತ್ತು ನಿರಂತರವಾದ ಸಂಬಂಧವಿರಬೇಕೆಂದು, ಅನುಭವಿಗಳು ಅನೇಕ ಮಾರ್ಗಗಳಿಗಿಂತ ಯೋಗಮಾರ್ಗ ಮಾತ್ರ ನಿಶ್ಚಿತ ಪರಿಣಾಮ ಬೀರಬಲ್ಲುದೆಂದು ಯೋಗಿಗಳು ದೀರ್ಘಕಾಲದ ಸಾಧನೆಯ ಅನುಭವದಿಂದ ಕಂಡುಕೊಂಡಿದ್ದಾರೆ.

ಉಳಿದೆಲ್ಲ ಮಾರ್ಗಗಳು ಸಂಕೀರ್ಣವಾದವು; ಸಮಸ್ಯಾತ್ಮಕವಾದವು; ಅಡ್ಡ ಪರಿಣಾಮ ಉಂಟುಮಾಡುವಂತಹವು. ವಾಸ್ತವವಾಗಿ, ಅವೆಲ್ಲ ಒಂದು ರೀತಿಯ ತಾಂತ್ರಿಕ ಮಾರ್ಗಗಳೆಂದು, ಯಾಂತ್ರಿಕ ಮಾರ್ಗಗಳೆಂದೇ ಹೇಳಬಹುದು. ಆದರೆ, ಮನುಷ್ಯನ ಮನಸ್ಸಿಗೆ ನಿಜವಾದ ಶಾಂತಿಯನ್ನು ತಂದುಕೊಡುವುದು ಆಧ್ಯಾತ್ಮಿಕ ಚಿಂತನೆ. ಯಾಂತ್ರಿಕ ಅಥವಾ ತಾಂತ್ರಿಕ ಮಾರ್ಗಗಳಿಂದ ಆಧ್ಯಾತ್ಮಿಕ ಬೆಳವಣಿಗೆ ಆಗುವುದಿಲ್ಲ. ಇದು ಒಬ್ಬಿಬ್ಬರದಲ್ಲ, ಲಕ್ಷಲಕ್ಷಾಂತರ ಜನರ ಅನುಭವಕ್ಕೆ ಬಂದಿರುವ ಸಂಗತಿ.

ಆದರೆ ಯೋಗಮಾರ್ಗದಲ್ಲಿ ಯಾವುದೇ ಯಾಂತ್ರಿಕತೆ–ತಾಂತ್ರಿಕತೆಗಳಿಲ್ಲ. ಅದು ಪ್ರಕೃತಿಸಹಜ ಸಾಧನೆ. ಆ ಸಾಧನೆಯಿಂದ ವ್ಯಕ್ತಿ ಹೆಚ್ಚು ಮೌನವಾಗುತ್ತಾನೆ; ಪ್ರಸನ್ನನಾಗುತ್ತಾನೆ. ಮನ ಶಾಂತಿಯನ್ನು ಅನುಭವಿಸುತ್ತದೆ. ಸಾತ್ವಿಕ ಜೀವನಕ್ಕೆ, ಸಹನೆಯ ಬದುಕಿಗೆ, ಉನ್ನತ ನುಡಿ–ನಡೆಗಳಿಗೆ ಯೋಗವಿಧಾನ ತುಂಬ ನೆರವಾಗುತ್ತದೆ. ಯೋಗದ ವಿಶೇಷವೆಂದರೆ, ಆದ ಗಾಯಕ್ಕೆ ಮದ್ದು ಹಚ್ಚುವುದಕ್ಕಿಂತ, ಗಾಯವೇ ಆಗದಂತೆ ನೋಡಿಕೊಳ್ಳುವುದು.

ಎಲ್ಲಿಯವರೆಗೆ ನಾವು ಬದುಕಿರಬಯಸುತ್ತೇವೆಯೋ, ಅಲ್ಲಿಯವರೆಗೆ ಶಾಂತಿಯನ್ನು ಬಯಸುವುದು ಸಹಜ. ಆದ್ದರಿಂದ ನಾವು ಜೀವನದುದ್ದಕ್ಕೂ ಯೋಗಮಾರ್ಗದಲ್ಲೇ ನಡೆಯಬೇಕು. ಅದು ಹೊರತಾಗಿ, ಉಳಿದ ಕೃತಕ ಮಾರ್ಗಗಳಿಂದ ಆಕರ್ಷಿತರಾಗಬಾರದು. ಅವೆಲ್ಲ ಹೇಗೆ ಕೃತಕವೋ, ಅವುಗಳ ಪರಿಣಾಮವೂ ಕೃತಕ; ತಾತ್ಕಾಲಿಕ. ಆದರೆ ಯೋಗದ ವಿಷಯ ಹಾಗಲ್ಲ. ಅದು ವಾಸ್ತವವಾಗಿ ನೈಸರ್ಗಿಕ; ಸಹಜ. ಅದು ದೇಹ, ಮನಸ್ಸು ಮತ್ತು ಹೃದಯ ಈ ಮೂರರ ಕ್ಷೇಮವನ್ನು ನೋಡಿಕೊಳ್ಳುತ್ತದೆ. ಅವು ಸದಾ ಹೊಂದಿಕೊಂಡು ಕೆಲಸಮಾಡುವಂತೆ ಮಾಡುತ್ತದೆ. ಹಾಗಾಗಿ ಯೋಗದ ಪರಿಣಾಮ ಶಾಶ್ವತ; ಪ್ರಶಾಂತ. ಅದರ ಪ್ರಭಾವದಿಂದಾಗಿ ಆಧ್ಯಾತ್ಮಿಕತೆ ತನಗೆ ತಾನೇ ಅರಳುತ್ತದೆ.

ಯೋಗ ಕೇವಲ ದೈಹಿಕ ವ್ಯಾಯಾಮವಲ್ಲ; ಮಾನಸಿಕ ಆಯಾಮಗಳನ್ನೆಲ್ಲ ಅದು ನಿಯಂತ್ರಿಸುತ್ತದೆ; ನಿಯತಿಗೊಳಿಸುತ್ತದೆ. ಅರ್ಹ ಗುರುವಿನಿಂದ ಯೋಗ ಶಿಕ್ಷಣ ಪಡೆಯಬೇಕು. ಈಚೆಗೆ ಯೋಗ ಶಿಕ್ಷಣವೂ ವಾಣಿಜ್ಯ ವ್ಯವಹಾರವಾಗಿದೆ. ಈ ಬಗೆಗೆ ಯೋಗಾಭ್ಯಾಸದ ಆಸಕ್ತರು ತುಂಬ ಎಚ್ಚರ ವಹಿಸಬೇಕು. ಯೋಗ ವಾಸ್ತವವಾಗಿ ಒಂದು ವಿಜ್ಞಾನ. ಹಾಗಾಗಿ ಅದನ್ನು ವೈಜ್ಞಾನಿಕವಾಗಿ ಅಂದರೆ ಸೂತ್ರಬದ್ಧವಾಗಿ ಅಭ್ಯಾಸ ಮಾಡಬೇಕು. ಹಾಗೆ ಅಭ್ಯಾಸಮಾಡಿ ಯೋಗಸಿದ್ಧಿಯನ್ನು ಪಡೆದ ವ್ಯಕ್ತಿ ಸದಾ ದೈಹಿಕವಾಗಿ ಸ್ವಸ್ಥವಾಗಿರುತ್ತಾನೆ; ಮಾನಸಿಕವಾಗಿ ಪ್ರಫುಲ್ಲನಾಗಿರುತ್ತಾನೆ. ಅವನ ಹೃದಯ ಹದವರಿತು ಕೆಲಸಮಾಡುತ್ತದೆ.

ನನ್ನ ಅಭಿಪ್ರಾಯದಲ್ಲಿ ಈ ಯೋಗಾಭ್ಯಾಸ ಮಕ್ಕಳಿಗೆ ಪ್ರಾಥಮಿಕ ಹಂತದಿಂದಲೇ ಕಡ್ಡಾಯವಾಗಬೇಕು. ಮಕ್ಕಳನ್ನು ದೇಶದ ಭವಿಷ್ಯದ ಪ್ರಜೆಗಳೆಂದು ಕರೆದರೆ ಸಾಲದು. ಅವರನ್ನು ಅಂತಹ ಸತ್ಪ್ರಜೆಗಳನ್ನಾಗಿ ರೂಪಿಸಬೇಕು. ಅವರು ದೈಹಿಕ ಮತ್ತು ಮಾನಸಿಕ ಸವಾಲುಗಳನ್ನು ಎದುರಿಸುವ ಶಕ್ತಿ-ಸಾಮರ್ಥ್ಯಗಳನ್ನು ಪಡೆದಿರಬೇಕು. ದೇಶಕ್ಕೆ ಬೇಕಾದ ಸಭ್ಯನಾಗರಿಕರನ್ನು ಸಜ್ಜುಗೊಳಿಸಲು ಯೋಗ ಒಂದು ಸರಳ ಮತ್ತು ಶ್ರೇಷ್ಠಮಾರ್ಗ ಎಂಬುದನ್ನು ನಾವು ಮರೆಯಬಾರದು.

## ಯೋಗ ತರಗತಿ ಪ್ರಾರಂಭ



ಜೂನ್ 21ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ಕೇಂದ್ರ ಕಛೇರಿಯಲ್ಲಿ ಯೋಗ ಕೇಂದ್ರವನ್ನು ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಶ್ರೀ ಬಿ.ಎನ್. ಬ್ರಹ್ಮಚಾರ್ಯ ಮುಖ್ಯಸ್ಥರು, ಆರೋಗ್ಯ ಮಂದಿರ, ಬೆಂಗಳೂರು ಇವರು ಯೋಗದ ಮಹತ್ವವನ್ನು ವಿವರವಾಗಿ ತಿಳಿಸಿದರು. ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ಉಪಾಧ್ಯಕ್ಷರು, ಶ್ರೀ ಕೆ. ಗಂಗಪ್ಪಗೌಡ, ರಾಜ್ಯ ಕಾರ್ಯದರ್ಶಿ, ಶ್ರೀ ಎಂ.ಎ. ಚೆಲ್ಲಯ್ಯ, ನೋಡಲ್ ಆಫೀಸರ್, ಬಿ.ಬಿ.ಎಂ.ಪಿ. ಬಿ.ಎಸ್.ಜಿ. ಶ್ರೀ ಯು. ಕಾರ್ತಿಕೇಯನ್ ಯೋಗ ತರಬೇತಿಗಾರರು, ರಾಜ್ಯ ಸಂಸ್ಥೆ ಪದಾಧಿಕಾರಿಗಳು, ಸಿಬ್ಬಂದಿ, ಕೆ.ಆರ್.ಡಿ.ಎಲ್. ಕಛೇರಿಯ ಸಿಬ್ಬಂದಿ ಹಾಗು ಇತರರು ಸಮಾರಂಭದಲ್ಲಿ ಭಾಗವಹಿಸಿದ್ದರು.

ಪ್ರತಿ ಬುಧವಾರ, ಗುರುವಾರ ಮತ್ತು ಶುಕ್ರವಾರ ಸಂಜೆ 5.30 ರಿಂದ 6.30 ರ ವರೆಗೆ ನುರಿತ ಗುರುಗಳಿಂದ ತರಬೇತಿ ನೀಡಲಾಗುತ್ತದೆ. ಆಸಕ್ತಿಯಿರುವ ಸಾರ್ವಜನಿರು, ಉಪನ್ಯಾಸಕರು, ಸಿಬ್ಬಂದಿವರ್ಗದವರು ಹಾಗು ಇತರರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬೇಕಾಗಿ ವಿನಂತಿ.

**ನೊಂದಣಿ ಮತ್ತು ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ:**

**ದೂರವಾಣಿ: 080-22260017, 22267470 ಮೊಬೈಲ್: 9845986119**

### ಚತುರ್ಥ ಚರಣ್ ಕಬ್ಸ್, ಹಿರಕ್ ಪಂಖ್ ಬುಲ್‌ಬುಲ್ಸ್
### ರಾಜ್ಯಪುರಸ್ಕಾರ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳಿಗೆ

# ಪ್ರಶಸ್ತಿ ಪ್ರದಾನ ಸಮಾರಂಭ




2018–19ನೇ ಸಾಲಿನಲ್ಲಿ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್, ಗೈಡ್ಸ್, ರೋವರ್ಸ್, ರೇಂಜರ್ಸ್‌ಗಳು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ 923 ಕಬ್ಸ್, 874 ಬುಲ್‌ಬುಲ್ಸ್, 1440 ಸ್ಕೌಟ್ಸ್, 1191 ಗೈಡ್ಸ್, 112 ರೋವರ್ಸ್, 136 ರೇಂಜರ್ಸ್ ಒಟ್ಟು 4676 ಮಕ್ಕಳು ಯುವಕರುಗಳಿಗೆ ರಾಜ್ಯಪುರಸ್ಕಾರ್ ಪ್ರಶಸ್ತಿ ಪತ್ರಗಳ ವಿತರಣೆ ಕಾರ್ಯಕ್ರಮದ ಪೂರ್ವಬಾವಿ ಶಿಬಿರವನ್ನು ಜೂನ್ 24 ಮತ್ತು 25, 2019ರಂದು ಶಾಂತಿಗೃಹ, ರಾಜ್ಯ ಕೇಂದ್ರ ಕಛೇರಿಯಲ್ಲಿ ಆಯೋಜಿಸಲಾಗಿತ್ತು.

ಪ್ರಶಸ್ತಿ ಪಡೆದ ಒಟ್ಟು ಮಕ್ಕಳಲ್ಲಿ ಜೂನ್ 25ರಂದು ರಾಜಭವನದಲ್ಲಿ ಜರುಗಿದ ಸಮಾರಂಭದಲ್ಲಿ 34 ಜಿಲ್ಲೆಗಳಿಂದ 466 ಮಕ್ಕಳು ಮತ್ತು ಶಿಕ್ಷಕರು, ಪೋಷಕರು ಹಾಗು ಇತರರು ಸೇರಿ 600ಕ್ಕೂ ಹೆಚ್ಚು ಸಭಿಕರು ಭಾಗವಹಿಸಿದ್ದರು.

ಜೂನ್ 24ರಂದು ಬೆಳಗ್ಗೆ ಧ್ವಜಾರೋಹಣದೊಂದಿಗೆ ಪ್ರಾರಂಭವಾಗಿ ನಂತರ ಜಿಲ್ಲಾವಾರು ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್, ಗೈಡ್ಸ್ ಮತ್ತು ರೋವರ್ಸ್, ರೇಂಜರ್ಸ್‌ಗಳು ಪ್ರಮಾಣ ಪತ್ರವನ್ನು ಸ್ವೀಕರಿಸುವ ಆಯ್ಕೆ ಪ್ರಕ್ರಿಯೆಯನ್ನು ಮಾಡಲಾಯಿತು. ಮಧ್ಯಾಹ್ನದ ಅವಧಿಯಲ್ಲಿ ಘನತೆವೆತ್ತ ರಾಜ್ಯಪಾಲರಿಂದ ಜಿಲ್ಲಾವಾರು ಪ್ರಶಸ್ತಿ ಪತ್ರ ಸ್ವೀಕರಿಸುವ ಪುನರ್ ಮನನ ಮಾಡಿಸಲಾಯಿತು. ಸಂಜೆ ಸ್ಕೌಟಿಂಗ್/ಗೈಡಿಂಗ್ ಕೌಶಲ್ಯ ವಿಷಯಗಳ ಬಗ್ಗೆ ಅರಣ್ಯ ಇಲಾಖೆಯಿಂದ ಆಕರ್ಷಕ ಕ್ಲಿಪಿಂಗ್ಸ್‌ಗಳನ್ನು ಪ್ರದರ್ಶಿಸಲಾಯಿತು.

ಜೂನ್ 29ರಂದು ಬೆಳಗ್ಗೆ ಧ್ವಜಾರೋಹಣದೊಂದಿಗೆ ಮಕ್ಕಳು ಅತ್ಯುತ್ಸಾಹದೊಂದಿಗೆ ಪಥ ಸಂಚಲನದ ಮೂಲಕ ಶಾಂತಿಗೃಹದಿಂದ ರಾಜಭವನಕ್ಕೆ ತೆರಳಿ ಗಾಜಿನ ಮನೆಯಲ್ಲಿ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ಭಾಗವಹಿಸಿದ್ದರು, ಇವರೊಂದಿಗೆ ಪೋಷಕರು, ದಳನಾಯಕರು, ಜಿಲ್ಲಾ ಮತ್ತು ರಾಜ್ಯ ಸಂಸ್ಥೆ ಪದಾಧಿಕಾರಿಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು.

ರಾಜಭವನದಲ್ಲಿ ಶ್ರೀ ವಾಜುಬಾಯಿ ವಾಲಾ, ಕರ್ನಾಟಕದ ಗೌರವಾನ್ವಿತ ರಾಜ್ಯಪಾಲರು ಹಾಗೂ ಪೋಷಕರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ವೇದಿಕೆಗೆ ಆಗಮಿಸಿದಾಗ ಕೆ.ಎಸ್.ಆರ್.ಪಿ ಬ್ಯಾಂಡನಿಂದ ರಾಷ್ಟ್ರಗೀತಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು, ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಘನತೆವೆತ್ತ ರಾಜ್ಯಪಾಲರು, ಮಾನ್ಯ ಶ್ರೀ ಜಿ.ಟಿ. ದೇವೇಗೌಡ, ಉನ್ನತ ಶಿಕ್ಷಣ

ಸಚಿವರು, ಕರ್ನಾಟಕ ಸರ್ಕಾರ, ವೇದಿಕೆಯ ಮೇಲಿದ್ದ ಎಲ್ಲ ಅತಿಥಿಗಳನ್ನು ಸ್ವಾಗತಿಸಿ, ರಾಜ್ಯದ ಬೆಳವಣಿಗೆಯ ವಿವಿಧ ಮುಖ್ಯಾಂಶಗಳನ್ನು ಸಭಿಕರಿಗೆ ಮತ್ತು ರಾಜ್ಯಪಾಲರಿಗೆ ವಿವರಿಸಿದರು.



ಆದರಣೀಯ ಗೌರವಾನ್ವಿತ ರಾಜ್ಯಪಾಲರು ಮಕ್ಕಳಿಗೆ ಪ್ರಮಾಣಪತ್ರಗಳನ್ನು ವಿತರಿಸಿ ಮಾತನಾಡುತ್ತಾ ಭಾರತಾಂಬೆಯ ಮಕ್ಕಳು ಇತರರಿಗೆ ಮಾದರಿಯಾಗಿ "ವಸುದೈವ ಕುಟುಂಬಕಂ" ಎನ್ನುವಂತೆ ಸಮಾನ ಮನಸ್ಕರಾಗಿ ದಯಾವಂತರಾಗಿ ಶಿಸ್ತು, ಗೌರವ, ದೇಶಾಭಿಮಾನ ಇತರರಿಗೆ ಸಹಾಯ ಮಾಡುವಂತೆ ಮಾನವೀಯ ಮೌಲ್ಯಗಳನ್ನು ಎಲ್ಲರೂ ಎತ್ತಿ ಹಿಡಿಯಲು ಸೂಚಿಸಿದರು. ರಾಷ್ಟ್ರಕ್ಕಾಗಿ ದುಡಿಯೋಣ, ರಾಷ್ಟ್ರಕ್ಕಾಗಿ ಬದುಕೋಣ, ದೇಶದ ಅಭಿವೃದ್ಧಿಗೆ ಪ್ರೋತ್ಸಾಹ ನೀಡುವಂತಹ ಮಕ್ಕಳು ಸ್ಕೌಟ್ಸ್, ಗೈಡ್ಸ್‌ಗಳು, ಇದು ಹೊಸ ಸಂಸ್ಥೆಯಲ್ಲ ವಿಶ್ವಕ್ಕೆ ಹೆಸರುವಾಸಿಯಾಗಿದೆ. ಕರ್ನಾಟಕ ಹಲವಾರು ಸಮಾಜಮುಖಿ ಕಾರ್ಯಕ್ರಮಗಳನ್ನು ಮಾಡುತ್ತಿದೆ. ಸೇವೆಯೇ ನಮ್ಮ ಕಾರ್ಯ. ಕಾಯಕವೇ ಕೈಲಾಸ ಎಂದು ತಿಳಿಸಿದರು ಮತ್ತು ಭಾರತಾಂಬೆಗೆ ಜಯವಾಗಲಿ ಎಂಬ ಉದ್ಘೋಷವನ್ನು ಜೋರಾಗಿ ಹೇಳಿ ಭಾರತಾಂಬೆಗೆ ತಲುಪುವಂತೆ ಮಕ್ಕಳಲ್ಲಿ ಉತ್ಸಾಹ ತುಂಬಿದರು.



ಶ್ರೀಮತಿ ತೇಜಸ್ವಿನಿ ಅನಂತಕುಮಾರ್, ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ಮಾತನಾಡಿ ಮಕ್ಕಳಿಗೆ ಶಿಸ್ತು, ಸಮಯ ಪ್ರಜ್ಞೆ, ಪ್ಲಾಸ್ಟಿಕ್ ಬಳಕೆಯ ನಿಷೇದ ಮುಂತಾದ ಉಪಯುಕ್ತ ಮಾಹಿತಿಗಳನ್ನು ನೀಡಿದರು. ನಂತರ ರಾಜ್ಯಪಾಲರು ಜಿಲ್ಲಾವಾರು ಕಬ್ಸ್, ಬುಲ್‌ಬುಲ್ಸ್, ಸೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್ ಪ್ರಶಸ್ತಿ ಪಡೆದ ಮಕ್ಕಳಿಗೆ ಪ್ರಶಸ್ತಿ ಪ್ರಮಾಣ ಪತ್ರವನ್ನು ನೀಡಿ ಅಭಿನಂದಿಸಿದರು.



ಉನ್ನತ ಶಿಕ್ಷಣ ಸಚಿವರಾದ ಶ್ರೀ ಜಿ.ಟಿ ದೇವೇಗೌಡ ಅವರು ಮಾತನಾಡಿ ದೇಶದ ಭವಿಷ್ಯ ರೂಪಿಸುವ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಇಂದು ಹೆಮ್ಮರವಾಗಿ ಬೆಳೆದಿದೆ, ಕಾಲೇಜು ವಿಶ್ವವಿದ್ಯಾನಿಲಯಗಳಲ್ಲಿ ಆಟ, ಯೋಗ, ಧ್ಯಾನಕ್ಕೆ ಹೆಚ್ಚಿನ _ಮಹತ್ವವನ್ನು- ನೀಡಲಾಗಿದೆ. ಈ ಸಂಸ್ಥೆಯ ಬೆಳವಣಿಗೆಗೆ ಸರ್ಕಾರದಿಂದ ಎಲ್ಲಾ ರೀತಿಯ ಸಹಕಾರ ನೀಡುವುದಾಗಿ ತಿಳಿಸಿದರು..

ಉಪಾಧ್ಯಕ್ಷರುಗಳಾದ ಶ್ರೀ ಕೊಂಡಜ್ಜಿ ಬ ಷಣ್ಮುಖಪ್ಪ, ಶ್ರೀಮತಿ ಭಾರತಿ ಚಂದ್ರಶೇಖರ್, ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ, ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀ ಬಿ.ಕೆ ಬಸವರಾಜ, ವಿಧಾನ ಪರಿಷತ್ ಸದಸ್ಯರಾದ ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ ಹಾಗು ಜಿಲ್ಲೆ ಮತ್ತು ರಾಜ್ಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು, ಪೋಷಕರು, ಶಿಕ್ಷಕರು ಆಹ್ವಾನಿತರು ಭಾಗವಹಿಸಿದ್ದರು. ಕೊನೆಯಲ್ಲಿ ರಾಜ್ಯ ಸ್ಕೌಟ್ ಆಯುಕ್ತ ಶ್ರೀ ಎಂ.ಎ. ಖಾಲಿದ್‌ರವರು ಸರ್ವರಿಗೂ ವಂದನೆಗಳನ್ನು ಸಲ್ಲಿಸಿದರು. ರಾಷ್ಟ್ರಗೀತೆಯೊಂದಿಗೆ ಕಾರ್ಯಕ್ರಮವು ಕೊನೆಗೊಂಡಿತು.







# SCOUT GUIDE VOLUNTEERS' TRAINING COURSE

held at Dr. Annie Besant Scouts & Guides Training Cum CampingCentre Doddaballapura, Bengaluru Rural District (From 08th May to 08th June 2019)



Scout Guide Volunteers (SGV's) is one of the best schemes of BS&G which create's a good number of leaders at different levels for the Organization and Community. After 30 years of implementation the scheme. The Visionary Leader of the Karnataka State Sri P.G.R. Sindhia, State Chief Commissioner and his team decided to organize SGV Training Programme for newly appointed 25 SGV's of the State. After long discussions in different sittings, a programme was designed for the SGV Training with great expectation to contribute a good asset to the Professionalism to Karnataka State Bharat Scouts and Guides.



SGV Training kicked off with a simple symbolic Opening Ceremony under the Leadership of Shri PGR Sindhia, State Chief Commissioner on 08th May 2019 at Dr. Annie Besant Scouts & Guides Training cum Camping Centre, Doddaballapur Karnataka while the guests lighted the Lamp and Inaugurated the SGV Training. All the 28 Participants imprinted their hands along with guests to mark the Commitment to the Movement on this Historic Day. The Course was inaugurated by Sri K. Gangappa Gowda, State Secretary, BSG, who in his inaugural address emphasized "Be a Leader, Not a Boss" and urged the participants to make the best of the training. Sri R. Krishnaswamy, Director, BSG, Delhi in his opening remarks Congratulated the Leadership of Karnataka for taking such a huge step in organising the SGV training which will create leadership for the generations to come and this is a positive step towards Developing Professional Leadership. The Course was coordinated by Sri Analendra Sarma, Regional Organising Commissioner, Southern Region, BSG, National Headquarters.

The Training was cascade down for covering different topics which are considered to be useful to create leadership like Mindset & Attitude, Communication, Personal & Public Relation, Personality Development & Leadership, Relationship between Volunteer and Professional, Professional Ethics, Public Speaking, Teaching Technique & Methods, Counselling, Event Management, Time Management, Human Relation & Stress Management etc. At the same time giving importance to the topics related to the organization i.e. What is Scouting, History of the Movement, Organisational Structure/Level of Organisation, Advancement of Young People, Advancement of Units



Leader, Youth Programme, Fundamentals of BSG, Rovering to Success, Formation of Unit, Administration of LA & DA, International Brotherhood (WOSM) and Sisterhood (WAGGGS), Information about Beginners' Course, Awards and Decorations in BSG, WOSM & WAGGGS Initiatives, Vision 2024, Patrol System, Ceremonies & Ceremonials, Running Unit & Maintaining Records, Scouting & Community, Camping & Hiking etc. Also, it was taken care to provide learning opportunities during the Training to practice Scouting Skills like Pioneering, Mapping, First-Aid, Estimation apart from regular activities of B.P Six, Yoga, Aerobics, Simple Drill, Inspection and Flag Ceremony. Opportunities provided to practice different types of Flag Ceremonies section wise apart from Common Flag Ceremony. Different types of Unit Meetings were also demonstrated during the Training so that our SGVs will have knowledge in all sections.

To be a good leader, SGV should develop their knowledge in all the areas, hence sessions like Duties and Responsibility of SGV, Planning and Prepartion of Action Plan, Maintanance of District Profiles, Preparation & Presentation of Audio Visual Aids, specially Power Point, Documentation & Maintaining Records, Maintaining and Submitting Accounts etc. were discussed during the training. Apart from Campfire, different activities were performed and presented like Pep-talk, Case Study, Film Show, Quiz etc. during the evening sessions.

In the second phase of the Training, opportunities were extended to become an effective Leader and a Liaison between State and District by arranging Computer Education and Spoken English Classes for all SGV's at Mysuru from 21st to 30th May 2019 under the leadership of Sri B.K. Basavaraja, Joint State Secretary, Karnataka and the active given by support of Sri P. Viswanath, District Chief Commissioner of Mysuru Dirstrict Association.



Importance was given in the third phase of Training to expose the talents of the SGV's by speaking and presenting themselves in different occasions. Field Visit was one of the important aspects of the SGV's Job, hence they attempted to visit different Schools nearby area of Doddaballapur and they met Heads of the Institutions, Unit Leaders and Students and interacted with Scouters-Guiders and gained lot of experience and shared their experience during the presentation of visit reports. Shri P G R Sindhia, State Chief Commissioner, Karnataka BSG and Former Home Minister, Govt. of Karnataka symbolically Inaugurated the World Environment Day in the Dr. Annie Besant Scouts-Guides Training cum Camping Centre and he addressed a press meet and mentioned about the Karnataka BSG plans to Celebrate the Occasion in great zeal on 21st June 2019 at all



levels along with International Yoga Day. All the SGVs took active part in the World Environment Day Celebration's and everybody planted saplings in the Training Center.

All the participants were accustomed with Scouting/Guiding Knowledge and some of the Participants have already completed Pre-ALT and HWB Course and there was no one new for this organization, so it was advantage for the Resource Persons to deliver the topics, right from the day, the activities were Planned in April 2019, a team worked hard to materialize it; there were apprehension by many. It was well executed by a dedicated team of BSG, Karnataka supported by the National Headquarters Professionals and State Headquarters Staff Members. It was a milestone for the Scout movement that more than 36 Resource Persons contributed to the Training by handling different sessions. The Presence of the Director of BSG Sri R. Krishnaswamy and Joint Director, NTC Sri M.S. Qureshi lifted the spirits of the young people and added value to the training. Contribution of the resource persons invited for different sessions really had great impact in the success of the training and it will remain in the hearts of the participants. Support to develop the efficiency of the SGV's all the handouts and presentations were provided in soft and hard copies apart from the kit of APRO - I, APRO - II, APRO - III, Scouting for Boys, Rovering to Success, Rules, Progress Cards, Job Profiles etc. by was State. The Director of BSG was glad to present a copy of the "Scouting for Boys" to each SGV's from the end of National Headquarters.





Presence of the State Chief Commissioner, Karnataka State BSG Sri PGR Sindhia has given a new dimension to the Course and Inspiration for all the participants. His speech always had a great impact on the participants and same is reflecting here also. He appealed to all the SGV's to develop their personality and be a Honest Leader by Practicing Truth in Personal and Public Life and contribute their best to the Community through Scout Guide Movement. The most expected moment came and a smile was seen in everybody's face when Sri B.K. Basavaraja, Joint State Secretary announced the appointment of SGV's and distributed appointment letters to all the Candidates. The Course came to end by lowering the flag and singing National Anthem.

Report prepared by: Analendra Sarma
Regional Organising Commissioner (S)
Southern Region, BSG, Bengaluru

# ರಾಜ್ಯ ಮಟ್ಟದ ತರಬೇತುದಾರರ ಸಮಾವೇಶ



ಮೇ 23ರಿಂದ 26ರ ವರೆಗೆ ಬ್ರಹ್ಮಕುಮಾರಿಸ್ ವಿಶ್ವವಿದ್ಯಾನಿಲಯ, ಮೌಂಟ್ ಅಬು, ರಾಜಸ್ಥಾನ ಇಲ್ಲಿ ರಾಜ್ಯಮಟ್ಟದ ತರಬೇತುದಾರರ ಸಮಾವೇಶವನ್ನು ಏರ್ಪಡಿಸಲಾಗಿತ್ತು.

ಸಂಜೆ 6.00 ಕ್ಕೆ ಉದ್ಘಾಟನಾ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ಉದ್ಘಾಟಕರಾಗಿ ಶ್ರೀ ಪಿ.ಜಿ.ಆರ್. ಸಿಂಧ್ಯಾ, ರಾಜ್ಯ ಮುಖ್ಯ ಆಯುಕ್ತರು ಹಾಗೂ ಶ್ರೀ ರಾಜಯೋಗಿ ಬಿ.ಕೆ. ಮೃತ್ಯುಂಜಯ ಅಣ್ಣರವರು, Chairperson Education ,RERF, ಮುಖ್ಯ ಅತಿಥಿಗಳಾಗಿ ಡಾ॥ ಮಹೇಶ್ ಹೇಮಾದ್ರಿ, ಎಂ.ಬಿ.ಬಿ.ಎಸ್ (P.G.Diplomo in Geriatric Medicine) ಅವರು ಆಗಮಿಸಿದ್ದರು. ಶ್ರೀಮತಿ ಬಿ.ಕೆ.ಶಿವಿಕ ಅಕ್ಕನವರು ಉಪಸ್ಥಿತರಿದ್ದರು. ಸಮಾವೇಶದ ನಾಯಕರಾಗಿ ಡಾ॥ ಹೆಚ್.ಬಿ.ಭರಶೆಟ್ಟಿ, ಎಲ್.ಟಿ (ಸ್ಕೌ) ಹಾಗೂ ಗೈಡ್ ವಿಭಾಗದ ನಾಯಕಿಯಾಗಿ ಶ್ರೀಮತಿ ಅರುಣಮಾಲಾ, ಎಲ್.ಟಿ (ಗೈ), ಶ್ರೀ ಆನ್‌ಬರಸನ್,ಎಲ್.ಟಿ (ಸ್ಕೌ) ಚೆನ್ನೈ, ಡಾ॥ ಶರ್ಮ, ಎಲ್.ಟಿ (ಸ್ಕೌ) ಜಯಪುರ, ರಾಜಸ್ಥಾನ, ಸಹಾಯಕರಾಗಿ ಶ್ರೀ ಕರಿಸಿದ್ದಪ್ಪ, ಎ.ಎಲ್.ಟಿ (ಸ್ಕೌ) ಶ್ರೀಮತಿ ಮಲ್ಲೇಶ್ವರಿ ಜುಜಾರೆ, ಎ.ಎಲ್.ಟಿ (ಗೈ) ಹಾಗೂ ಶ್ರೀಮತಿ ಎನ್. ಕುಮಾರಿ ಹೊನ್ನಮ್ಮ, ಎ.ಎಲ್.ಟಿ (ಗೈ) ಕಾರ್ಯನಿರ್ವಹಿಸಿದರು.

ಮೇ 23 ರಿಂದ 25ರವರೆಗೆ Beginners Course, Sectional Problems and How to overcome the Problems, SWOT Group Work, Training Market,Vision 2024 by State Chief Commissioner, Adults in Scouting by Sharma, Preparation of Teaching Aids and Teaching Methods and Group Discussion, Wood Badge 100 and Schedule of Events ಈ ವಿಷಯಗಳ ಬಗ್ಗೆ ಗುಂಪು ಚರ್ಚೆ, ಪವರ್ ಪಾಯಿಂಟ್ ಪ್ರಸೆಂಟೇಷನ್ ಮುಖಾಂತರವಾಗಿ ತಿಳಿಸಲಾಯಿತು. ಆಧ್ಯಾತ್ಮಿಕದ ಬಗ್ಗೆ ಬ್ರಹ್ಮಕುಮಾರಿಸ್ ಅವರುಗಳಿಂದ ತಿಳಿಸಿಕೊಡಲಾಯಿತು.

ಉದ್ಘಾಟನಾ ನುಡಿಯಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯಾ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸುಮಾರು 38 ವರ್ಷಗಳ ಆಮಂತ್ರಣದ ನಂತರ ತಾವು ಇಲ್ಲಿ ಭಾಗವಹಿಸುತ್ತಿರುವುದು ನನ್ನ ಪುಣ್ಯ ಎಂದು ಭಾವಿಸಿದ್ದೇನೆ ಎಂದರು. ಈ ಪವಿತ್ರವಾದ ಸ್ಥಳಕ್ಕೆ 35 ಸಾವಿರ ಕಾರ್ಯಕರ್ತರು ಸೇವೆಗೆ ಸಮರ್ಪಣೆ ಮಾಡಿಕೊಂಡಿದ್ದಾರೆ ಹಾಗೂ ಯಾವುದೇ ಪಲಾಪೇಕ್ಷೆ ನಿರೀಕ್ಷಿಸದೆ ನಿಸ್ವಾರ್ಥ ಸೇವೆಯಿಂದ ಬ್ರಹ್ಮಕುಮಾರಿ ವಿಚಾರಗಳನ್ನು ಅಧ್ಯಯನ ಮಾಡಿ ಈ

ಸಂಸ್ಥೆಯಲ್ಲಿ ವೇದ, ಉಪನಿಷತ್‌ಗಳ ಜೊತೆಗೆ ವಿಶ್ವಶಾಂತಿಯನ್ನು ಸಾರುವ ಕೆಲಸವನ್ನು ಮಾಡುತ್ತಿದ್ದಾರೆ. ಕರ್ನಾಟಕದಲ್ಲಿ ಸ್ಕೌಟ್ ಮತ್ತು ಗೈಡ್ ತರಬೇತುದಾರರಿಗೆ ಆಧ್ಯಾತ್ಮಿಕ ವಿಷಯದ ಬಗ್ಗೆ ತಿಳಿದುಕೊಳ್ಳಲು ಅವಕಾಶ ಸಿಕ್ಕಿರುವುದು ಬಹಳ ಸಂತೋಷವಾಗಿದೆ. ಇಲ್ಲಿ ಅತ್ಯುನ್ನತ ರಾಷ್ಟ್ರಮಟ್ಟದ ಗಣ್ಯ ವ್ಯಕ್ತಿಗಳು ಬಂದು ವಾಸ್ತವ್ಯವನ್ನು ಮಾಡಿ ಹೋಗಿರುವುದು ಸಂತೋಷದ ವಿಷಯ. ಮುಂದಿನ ಜಾಂಬೂರಿಯ ಸಮಯಕ್ಕೆ ನಮ್ಮ ಎಲ್ಲಾ ಲೀಡರ್ಸ್‌ಗಳ ಸಹಕಾರದಿಂದ ಉತ್ತಮ ಗುಣಮಟ್ಟ ತರುವಲ್ಲಿ ಹಾಗೂ ಗುಣಮಟ್ಟದ ಕಡೆ ಹೆಚ್ಚಿನ ಆಸಕ್ತಿ ವಹಿಸುತ್ತೇವೆ. Spirituality is part of the Scouting ಕಬ್-ಬುಲ್‌ಬುಲ್ ನಗೆ, ಆಟ, ಹಾಡು, ಅದೇ ರೀತಿ 10-15 ವರ್ಷದಲ್ಲಿ ಸದಾ ಸಿದ್ದನಾಗಿರು ಎಂದು, 15-25 ವಯೋಮಾನದ ಯುವಕ-ಯುವತಿಯರು ಸೇವೆಗೆ ಸಿದ್ದರಾಗಿರುತ್ತಾರೆ. ಹೀಗೆ ಬ್ರಹ್ಮಕುಮಾರಿಸ್‌ನಲ್ಲೂ ಸಹ ಅತ್ಯುನ್ನತ ಕರ್ತವ್ಯ ಮತ್ತು ನಿರಂತರವಾಗಿ ತಮ್ಮ ಜೀವನವನ್ನು ಈ ಸಂಸ್ಥೆಗೆ ಮೀಸಲಿಟ್ಟುಕೊಂಡಿರುತ್ತಾರೆ. ಇವರುಗಳು ಯಾವುದೇ ಪಲಾಪೇಕ್ಷೆ ಇಲ್ಲದೆ ಸೇವೆ ಮುಡುಪಾಗಿಸಿಕೊಂಡವರು ಇಲ್ಲಿ ನೆಲೆಸಿದ್ದಾರೆ. ಸ್ಕೌಟ್ ಮತ್ತು ಗೈಡ್ ನಾಯಕರುಗಳು ಎಲ್ಲರೂ ಆದ್ಯಾತ್ಮಿಕದ ಬಗ್ಗೆ ತಿಳಿಯುವಂತಾಗಿರಬೇಕು. ಲೀಡರ್ ಟ್ರೈನರ್ಸ್‌ಗಳಾದ ತಾವುಗಳೆಲ್ಲರು ನೀವು ತಿಳಿದುಕೊಂಡು ಇತರರಿಗೆ ತಿಳಿಸುವಂತವರು. ನೀವು ಸ್ಕೌಟ್-ಗೈಡ್ ಗುಣಮಟ್ಟ ಹೆಚ್ಚಿಸುವಲ್ಲಿ ತಮ್ಮ ಸಹಾಯ ಸಹಕಾರ ಮುಖ್ಯವಾಗಿರುತ್ತದೆ. ನಿಮ್ಮ ಈ ಸೇವೆಗೆ ಬಹಳ ಸಂತೋಷವಾಗಿದೆ. ಇಲ್ಲಿ ಎಲ್ಲರ ಸಮ್ಮುಖದಲ್ಲಿ ಉದ್ಘಾಟನೆಯಾಗಿರುವ ಈ ಸಮಾರಂಭ ಯಶಸ್ವಿಯಾಗಲಿ. ಇದು ಒಂದು ದೊಡ್ಡ ಭಂಡಾರ. ಈ ಭಂಡಾರದಲ್ಲಿ ಇರುವಂತವರು ಕೂಡ ಭಂಡಾರವಿದ್ದಂತೆ ಎಂದು ತಿಳಿಸಿದರು.

# ಬೆಲ್ಲದಲ್ಲಿ ಮಾಡಿದ ಪಾನೀಯ ಉತ್ತಮ

ಡಾ॥ ವಿಜಯಲಕ್ಷ್ಮಿ ಬಾಳೇಕುಂದ್ರಿ
ಮಕ್ಕಳ ಹೃದಯರೋಗ ತಜ್ಞರು

ಹಿಂದಿನ ಕಾಲದಲ್ಲಿ ಯಾರಾದರೂ ಊರಿಂದ ಪ್ರವಾಸ ಮಾಡಿ ದಣಿದು ಬಂದರೆ ಅವರಿಗೆ ಕೈ-ಕಾಲು, ಮುಖ ತೊಳೆಯಲು ನೀರು ಕೊಟ್ಟು ಒಂದು ತುಂಡು ಬೆಲ್ಲ ತಿನ್ನಲು ಕೊಡುತ್ತಿದ್ದರು. ಜೊತೆಗೆ ಮಡಿಕೆಯಲ್ಲಿಯ ಹಿತವಾದ ತಂಪು ನೀರು ಕುಡಿಯಲು ಕೊಡುತ್ತಿದ್ದರು. ಇದರಿಂದ ಅವರ ದಣಿವು ಕ್ಷಣಾರ್ಧದಲ್ಲಿ ಮಾಯವಾಗುತ್ತಿತ್ತು. ಕಾರಣ ಬೆವರಿನಲ್ಲಿ ಹೋದ ನೀರಿನ ಲವಣಾಂಶ ತುಂಬಿ ಬೆಲ್ಲ ಅವರ ಲವಲವಿಕೆ ಹೆಚ್ಚಿಸುತ್ತಿತ್ತು. ಕಾರಣ ಇಂದು ನಾವು ಬಳಸುವ ಸಕ್ಕರೆ (ಬಿಳಿ) ವಿಷವಾದರೆ, ಬೆಲ್ಲ ಆರೋಗ್ಯಕರವಾಗಿತ್ತು.

ಶುಶ್ರುತ ಸಂಹಿತೆಯ 45ನೇ ಅಧ್ಯಾಯದ 146 ಶ್ಲೋಕ ಹೇಗೆ ನಮ್ಮ ಪುರಾತನರು ಬೆಲ್ಲ ಹೇಗೆ ರಕ್ತ ಶುದ್ಧೀಕರಿಸುತ್ತದೆ, ಸಂದು ನೋವು, ಪಿತ್ತಕೋಶದ ತೊಂದರೆ ನಿವಾರಣೆ ಮಾಡಿ ಆರೋಗ್ಯ ವೃದ್ಧಿಸುತ್ತದೆ ಎಂದು ತಿಳಿಸಿದೆ. 2500 ವರ್ಷಗಳ ಹಿಂದಿನಿಂದ ಬಂದ ಆಯುರ್ವೇದದ ಔಷಧಿಗಳಲ್ಲೂ ಬೆಲ್ಲ ಬಳಸುತ್ತ ಬಂದಿದ್ದಾರೆ. ಹೊಗೆ ಕಫದಿಂದ ನಾಶವಾಗುವ ಶ್ವಾಸಕೋಶವನ್ನು ಗುಣಪಡಿಸುವ ಶಕ್ತಿ ಬೆಲ್ಲಕ್ಕೆ ಇದೆ. ಫ್ರಾನ್ಸಿನಲ್ಲಿ ನಡೆದ ಕೈಗಾರಿಕಾ Toxicology Research Workshop ನಲ್ಲಿ ಬೆಲ್ಲ ಹೇಗೆ ಧೂಳು, ಹೊಗೆ ಮಧ್ಯ ಕೈಗಾರಿಕೆಗಳಲ್ಲಿ ಕೆಲಸ ಮಾಡುವವರಿಗೆ ರಕ್ಷಣೆ ಕೊಡಬಹುದೆಂದು ವಿವರಿಸಿದ್ದನ್ನು ಕೇಳಿದರೆ ನಮ್ಮ ಪೂರ್ವಜರ ವೈಜ್ಞಾನಿಕತೆಯ ಅರಿವು ಆಗುವುದು.

ಬೆಲ್ಲದರಲ್ಲಿರುವ Magnesium ನಮ್ಮ ಶರೀರದ Acid base balance ಸಮತೋಲನಗೊಳಿಸುತ್ತದೆ. ಬೆಲ್ಲದಲ್ಲಿರುವ ಕಬ್ಬಿಣದ ಅಂಶ ರಕ್ತಹೀನತೆಯಿಂದ ನಿಶ್ಶಕ್ತರಾಗಿರುವುದರಿಂದ ತಡೆಯುತ್ತದೆ. ಬೆಲ್ಲದಲ್ಲಿರುವ Fructose ಇಂದು ತಾಯಂದಿರು ಕೊಡುವ Glucose-D ಗಿಂತ ಸಾವಿರ ಪಾಲು ಉತ್ತಮ. ಸಕ್ಕರೆಯ ಪಾನ, ಪಾನೀಯ ಎರಡೂ ಆರೋಗ್ಯಕ್ಕೆ ಹಾನಿಕಾರಕ. ಸಕ್ಕರೆ ತಯಾರಿಸುವಾಗ ಹೇರಳವಾಗಿ ಬಳಸುವ Sulpher Dioxide, ಸುಣ್ಣ, Phosphoric Acid, Bleaching Agents, Viscosity redecers ಎಲ್ಲವೂ ನಮ್ಮ ಆರೋಗ್ಯಕ್ಕೆ ಹಾನಿಕಾರ. ಆದ್ದರಿಂದ ಮಾರುಕಟ್ಟೆಯಲ್ಲಿ ಸಿಗುವ ಸಕ್ಕರೆಯ ಸಿರಪ್‌ಆಗಿರುವ ಮಾಜಾ, ಟೋರಿನೋ, ಕೋಕೋ ಕೋಲಾ, ಇತ್ಯಾದಿ ಪಾನೀಯಗಳು ಹಾನಿಕಾರಕ. ನಮ್ಮನ್ನು ಸಕ್ಕರೆ ಕಾಯಿಲೆಯ ರೋಗಿಗಳನ್ನಾಗಿ ಮಾಡುತ್ತವೆ. ಆದ್ದರಿಂದ ಹಣಕೊಟ್ಟು ಅನಾರೋಗ್ಯ ಖರೀದಿಸಿ ಕೆಟ್ಟ ಪಾನೀಯ ಕುಡಿಯುವುದನ್ನು ಬಿಟ್ಟು ಮನೆಯಲ್ಲಿ ಅಮ್ಮ ಮಾಡಿದ ಬೆಲ್ಲದಲ್ಲಿಯೂ ಲಿಂಬೆ ಹಣ್ಣಿನ ಪಾನಕ ಅತ್ಯಂತ ಉತ್ತಮವಾದದ್ದು. ಮರೆಯದಿರಿ. ಮಕ್ಕಳೇ Old is Gold ಬೆಲ್ಲ ಉತ್ತಮ. ಸಕ್ಕರೆ ವಿಷ.

# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ಜೂನ್ 21 ರಂದು ಬಳ್ಳಾರಿ ಜಿಲ್ಲೆ ಕೂಡ್ಲಿಗಿಯಲ್ಲಿ ನಡೆದ ವಿಶ್ವ ಯೋಗ ದಿನಾಚರಣೆ, ವಿಶ್ವ ಪರಿಸರ ದಿನಾಚರಣೆ ಹಾಗೂ ಮುಖ್ಯ ಗುರುಗಳ ಮಾಹಿತಿ ಶಿಬಿರ ಮತ್ತು 2019-20ನೇ ಸಮಾರಂಭದಲ್ಲಿ ಸಾಲಿನ ಯೋಜನಾ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಕೂಡ್ಲಿಗಿ ಹಿರೇಮಠದ ಪೀಠಾಧ್ಯಕ್ಷರಾದ ಶ್ರೀ ಶ್ರೀ ಪ್ರಶಾಂತ ಸಾಗರ ಸ್ವಾಮೀಜಿ ಮಾತನಾಡಿದರು. ನಂತರ ಗಿಡಗಳನ್ನು ನೆಡುವುದರ ಮೂಲಕ ವಿಶ್ವ ಪರಿಸರ ದಿನಾಚರಣೆಯನ್ನು ಅರ್ಥಗರ್ಭಿತವಾಗಿ ಆಚರಿಸಲಾಯಿತು. ಕಾರ್ಯಕ್ರಮದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳದ ಶ್ರೀಮತಿ ಉಮಾದೇವಿ ಹಾಗೂ ಕರ್ನಾಟಕ ಪ್ರಾಥಮಿಕ ಶಾಲಾ ಶಿಕ್ಷಕ ಸಂಘದ ಉಪಾಧ್ಯಕ್ಷರಾದ ಶ್ರೀಮತಿ ಇಂದಿರಾ ಹಾಗೂ ಇತರೆ ಶಾಲೆಗಳ ಮುಖ್ಯಗುರುಗಳು ಭಾಗವಹಿಸಿದ್ದರು.



ಪ್ರಾಸ್ತಾವಿಕವಾಗಿ ತಾಲೂಕ ಕಾರ್ಯದರ್ಶಿಗಳಾದ ಶ್ರೀ ಟಿ. ತಿಂದಪ್ಪ ಅವರು ಮಾತನಾಡಿದರು. ಕಾರ್ಯಕ್ರಮ ನಿರೂಪಣೆಯನ್ನು ರಾಜ್ಯ ಪ್ರತಿನಿಧಿಗಳಾದ ಶ್ರೀ ಶಿವಪುತ್ರಸ್ವಾಮಿ ನೆರವೇರಿಸಿದರು. ಖಜಾಂಚಿಗಳಾದ ಶ್ರೀ ಮಹಾಲಿಂಗ ಕುಮಾರ್ ವಂದಿಸಿದರು.

* ಜೂನ್ 21ರಂದು 5ನೇ ಅಂತರಾಷ್ಟ್ರೀಯ ಯೋಗ ದಿನಾಚರಣೆ, ವಿಶ್ವಯೋಗ ದಿನಾಚರಣೆ ಮತ್ತು 2019-20ನೇ ಸಾಲಿನ ವಾರ್ಷಿಕ ಯೋಜನಾ ಪುಸ್ತಕ ಬಿಡುಗಡೆ ಸಮಾರಂಭ



ವನ್ನು ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ಏರ್ಪಡಿಸಲಾಗಿತ್ತು. ನಂತರ ಮಹಾನಗರ ಪಾಲಿಕೆ ಆಯುಕ್ತರಾದ ಶ್ರೀಮತಿ ಎಂ.ವಿ. ತುಷಾರರಾಣಿ ಇವರು ಸಸಿಗೆ ನೀರೆರೆಯುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿ, ಪರಿಸರವೂ ಯಾವು ರೀತಿ ನಾಶವಾಗುತ್ತದೆ, ನಾವು ಹೇಗೆ ಪರಿಸರವನ್ನು ಮಾಲಿನ್ಯ ಗೊಳಿಸುತ್ತೇವೆ. ಎಂಬುದನ್ನು, ಹೇಗೆ ತಡೆಗಟ್ಟಬಹುದು ಎಂಬುದನ್ನು ಸ್ಕೌಟ್-ಗೈಡ್‌ಗಳಿಗೆ ತಿಳಿಸಿದರು ಹಾಗೂ ಮಹಾನಗರ ಪಾಲಿಕೆಯಿಂದ ಸಮವಸ್ತ್ರವನ್ನು ವಿತರಿಸಲು ವಿನಂತಿಸಿದಾಗ ಸಕಾರಾತ್ಮಕವಾಗಿ ಸ್ಪಂದಿಸಿದರು.

ನಂತರ ಶ್ರೀ ನಾಗರಾಜಪ್ಪ, ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬಳ್ಳಾರಿ ಇವರು ವಾರ್ಷಿಕ ಕಾರ್ಯಕ್ರಮದ ಪುಸ್ತಕವನ್ನು ಬಿಡುಗಡೆ ಮಾಡಿ ಗಣ್ಯರಿಗೆ ವಿತರಿಸಿದರು. ಕಾರ್ಯಕ್ರಮದ ಪುಸ್ತಕವನ್ನು ಪ್ರಶಂಸಿಸಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳು ಮಕ್ಕಳ ಬೆಳವಣಿಗೆಗೆ ಪೂರಕವಾಗಿವೆ ಎಂದು ತಿಳಿಸಿದರು. ಈ ಎಲ್ಲಾ ಕಾರ್ಯಕ್ರಮಗಳಿಗೆ ಪೂರ್ಣ ಸಹಕಾರ ನೀಡುವುದಾಗಿ ಜಿಲ್ಲೆಯ ಎಲ್ಲಾ ಪ.ಪೂ. ಕಾಲೇಜುಗಳಲ್ಲಿ ರೋವರ್ಸ್-ರೇಂಜರ್ಸ್ ಘಟಕಗಳನ್ನು ತೆರೆಯಲು ಆದೇಶಿಸಲಾಗುವುದು ಎಂದು ಭರವಸೆ ನೀಡಿದರು. ನಂತರ ಪತಂಜಲಿ ಯೋಗ ಸಮಿತಿಯ ನಗರ ಸಂಚಾಲಕರಾದ ಶ್ರೀ ಕೃಷ್ಣಮೂರ್ತಿಯವರು ಯೋಗ ಎಂದರೇನು? ಏಕೆ ಯೋಗಾಭ್ಯಾಸವನ್ನು

ಮಾಡಬೇಕು? ಅದರ ಪ್ರಯೋಜನಗಳ ಬಗ್ಗೆ ತಿಳಿಸುತ್ತಾ ಅವರ ತಂಡದವರು ಯೋಗ ಪ್ರದರ್ಶನ ಮಾಡಿ ಮಕ್ಕಳಿಗೆ ಯೋಗಾಭ್ಯಾಸ ಮಾಡಿಸಿದರು.

ಜಿಲ್ಲಾ ಅರಣ್ಯ ಇಲಾಖೆ ಮತ್ತು ಸಾಮಾಜಿಕ ಅರಣ್ಯ ಇಲಾಖೆಯ ಮುಖ್ಯಸ್ಥರಾದ ಶ್ರೀ ರಮೇಶ, ಐ.ಎಫ್.ಎಸ್. ಮತ್ತು ಶ್ರೀ ಕಿರಣ್ ಕುಮಾರ್ ಇವರು ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಗೆ ಬೀಜದುಂಡೆ ತಯಾರಿಕೆಗೆ ಬೇಕಾದ ಮಣ್ಣು, ಗೊಬ್ಬರ ಮತ್ತು ಬೀಜಗಳನ್ನು ಶಾಲೆಗಳಿಗೆ ಸರಬರಾಜು ಮಾಡಿ 3 ಲಕ್ಷ ಬೀಜದ ಉಂಡೆಗಳನ್ನು ಮಾಡಲು ಸಹಕರಿಸಿದರು.

ಅರಣ್ಯ ಇಲಾಖೆ ಉಪವಲಯ ಅರಣ್ಯಾಧಿಕಾರಿಗಳಾದ ಶ್ರೀ ಜೆ. ವಿರುಪಾಕ್ಷಿಯವರು ಪರಿಸರ ಸಮತೋಲನಲಕ್ಕೆ ನಾವು ಕೈಗೊಳ್ಳಬಹುದಾದ ಕ್ರಮಗಳು ಮತ್ತು ಇಂಗು ಗುಂಡಿಗಳ ಮಹತ್ವವನ್ನು ವಿವರಿಸಿದರು. ನಗರದ ಮಕ್ಕಳಿಂದ 1 ಲಕ್ಷ ಉಂಡೆಗಳನ್ನು ಸಿದ್ಧಪಡಿಸಿದ್ದಕ್ಕೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ಮತ್ತು ಶಿಕ್ಷಕರಿಗೆ ಹಾಗೂ ಸಹಕರಿಸಿದ ಇಲಾಖೆ ಮುಖ್ಯಸ್ಥರಿಗೆ ವಂದನೆ ಸಲ್ಲಿಸಿದರು. ಈ ಕಾರ್ಯಕ್ರಮಕ್ಕೆ ಸಾಮಾಜಿಕ ಅರಣ್ಯ ಇಲಾಖೆ ಕೂಡ ಸಹಕರಿಸಿದರು.

ಶ್ರೀ ಕೆ.ವೀರೇಶ, ಜಿಲ್ಲಾ ಆಯುಕ್ತರು (ಸ್ಕೌ) ಇವರು ಮಾತನಾಡುತ್ತ ಪರಿಸರ ರಕ್ಷಣೆಗೆ ಮಕ್ಕಳಿಗೆ ಹೆಚ್ಚು ಮಾರ್ಗದರ್ಶನದ ಬಗ್ಗೆ ಹಾಗೂ ಸಸಿಗಳನ್ನು ನೆಡುವ ಬಗ್ಗೆ ಮತ್ತು ಪ್ರತಿದಿನ ಯೋಗವನ್ನು ಮಾಡಿ ದೇಹವನ್ನು ಆರೋಗ್ಯವಾಗಿ ಇಟ್ಟುಕೊಳ್ಳಲು ತಿಳಿಸಿದರು. ಜಂಟಿ ಕಾರ್ಯದರ್ಶಿಗಳಾದ ಶ್ರೀಮತಿ ಎಸ್. ವಿಜಯಲಕ್ಷ್ಮಿ ಸಭೆಯಲ್ಲಿ ಉಪಸ್ಥಿತರಿದ್ದರು.

ಶ್ರೀ ಎಂ. ನಾಗರಾಜ್, ಡಿ.ಓ.ಸಿ. ಎಲ್ಲರನ್ನು ಸ್ವಾಗತಿಸಿದರು. ಶ್ರೀ ಚಂದ್ರಯ್ಯ ಮಠದ ಕಾರ್ಯದರ್ಶಿ, ಸ್ಥಳೀಯ ಸಂಸ್ಥೆ ಇವರು ವಂದಿಸಿದರು. ಶ್ರೀ ಪಿ. ಮಂಜುನಾಥಪ್ಪ, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌ) ಕಾರ್ಯಕ್ರಮ ನಿರೂಪಿಸಿದರು.



## ಬೆಳಗಾವಿ

ಮೇ 31 ರಂದು ಬೆಳಗಾವಿಯ ಜಿಲ್ಲಾ ಸ್ಕೌಟ್ ಭವನದಲ್ಲಿ ಜಿಲ್ಲಾ ಮಟ್ಟದ ಅಭಿವೃದ್ಧಿಯ ತಂತ್ರಾಂಶ ಕಾರ್ಯಾಗಾರವನ್ನು ರಾಜ್ಯ ಸಂಸ್ಥೆಯ ನಿರ್ದೇಶನ ಹಾಗೂ ಜಿಲ್ಲಾ ಮುಖ್ಯ ಆಯುಕ್ತರ ಮಾರ್ಗದರ್ಶನದಂತೆ ಆಯೋಜಿಸಲಾಯಿತು.



ಕಾರ್ಯಾಗಾರವು ಸ್ಕೌಟ್ಸ್-ಗೈಡ್ಸ್ ಪ್ರಾರ್ಥನೆಯೊಂದಿಗೆ ಪ್ರಾರಂಭಗೊಂಡಿತು. ಜಿಲ್ಲಾ ಗೈಡ್ ಆಯುಕ್ತರ ಉಪಸ್ಥಿತಿಯಲ್ಲಿ ಜಿಲ್ಲೆಯ ಬೆಳವಣಿಗೆಯ ಸಾಮರ್ಥ್ಯ, ನ್ಯೂನತೆ, ಅವಕಾಶಗಳು ಮತ್ತು ಒತ್ತಡಗಳ ಬಗ್ಗೆ ಸಮಗ್ರವಾಗಿ ಚರ್ಚಿಸಲಾಯಿತು. ನಂತರ ಎಲ್ಲಾ ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿಗಳಿಗೆ 2019-20ನೇ ಸಾಲಿನಲ್ಲಿ ಜಿಲ್ಲಾ ಸಂಸ್ಥೆಯಿಂದ ಹಮ್ಮಿಕೊಳ್ಳುವ ಕಾರ್ಯಕ್ರಮಗಳು, ತರಬೇತಿಗಳು ಹಾಗೂ ಗಣತಿ ಗುರಿಯನ್ನು ಸ್ಥಳೀಯ ಸಂಸ್ಥೆವಾರು ಹಂಚಲಾಯಿತು. ಸ್ಥಳೀಯ ಹಂತದಲ್ಲಿ ಯುವ ಕಾರ್ಯಕ್ರಮ, ವಯಸ್ಕ ಸಂಪನ್ಮೂಲ ತರಬೇತಿಗಳನ್ನು ಹಮ್ಮಿಕೊಳ್ಳುವಂತೆ, ಸ್ಥಳೀಯ ಮಟ್ಟದ ಆಡಳಿತ ಹಾಗೂ ಹಣಕಾಸಿನ ವ್ಯವಹಾರವು ಉತ್ತಮರೀತಿಯಾಗಿ ನಡೆಯುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳಿಗೆ ವಹಿಸಲಾಯಿತು. ರಾಜ್ಯ/ಜಿಲ್ಲಾ ಸಂಸ್ಥೆಯ ಪತ್ರಗಳಿಗೆ ತಕ್ಷಣ ಪ್ರತಿಕ್ರಿಯೆ ನೀಡುವಂತೆ ತಿಳಿಸಲಾಯಿತು.

ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದ ಜಿಲ್ಲಾ ಕೋಶಾಧಿಕಾರಿ ಶ್ರೀ ಎಸ್.ಸಿ. ಕಟ್ಟಿಮನಿ ಇವರು ಉಪನಿರ್ದೇಶಕರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ ಬೆಳಗಾವಿ (ದ) ಇಲ್ಲಿ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರಾಗಿ ಕಾರ್ಯನಿರ್ವಹಿಸಿ ಮೇ



31ರಂದು ವಯೋ ನಿವೃತ್ತಿ ಹೊಂದಿದ ಪ್ರಯುಕ್ತ ಸದರಿಯವರಿಗೆ ಜಿಲ್ಲಾ ಸಂಸ್ಥೆಯು ಪರವಾಗಿ ಸತ್ಕರಿಸಲಾಯಿತು. ಕಾರ್ಯಕ್ರಮದಲ್ಲಿ ಜಿಲ್ಲಾ ಕಾರ್ಯದರ್ಶಿ, ಜಿಲ್ಲಾ ತರಬೇತಿ ಆಯುಕ್ತರು(ಗೈ), ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಮತ್ತು ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಜೂನ್ 5 ರಂದು ಉಗಾರ ಬಿಕೆ ಜೈ ಜಿನೇಂದ್ರ ಎಜ್ಯುಕೇಶನ್ ಟ್ರಸ್ಟ್‌ನ ಕನ್ನಡ ಮಾಧ್ಯಮ ಪ್ರಾಥಮಿಕ ಹಾಗೂ ಪ್ರೌಢಶಾಲೆಯಲ್ಲಿ ವಿಶ್ವ ಪರಿಸರ ದಿನಾಚರಣೆಯನ್ನು ಶಾಲೆಯ ಮೈದಾನದಲ್ಲಿ ಪ್ರಾಥಮಿಕ ವಿಭಾಗದ ಪ್ರಧಾನ ಗುರುಮಾತೆಯರಾದ ಶ್ರೀಮತಿ ಶಾಂತಾ ಸತ್ತಿ ಅವರು ಸಸಿ ನೆಟ್ಟು ನೀರುಣಿಸುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಅದೇ ರೀತಿ ಪ್ರೌಢ ವಿಭಾಗದ ಪ್ರಧಾನ ಗುರುಗಳಾದ ಶ್ರೀ ಎ.ಎಂ. ದೇಸಾಯಿ ಅವರು ಮಾತನಾಡಿ ಪ್ರತಿಯೊಬ್ಬರು ಪರಿಸರ ಸಂರಕ್ಷಣೆ ಮಾಡಬೇಕೆಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು. ಶಾಲೆಯ ಸ್ಕೌಟ್ಸ್-ಗೈಡ್ಸ್ ಜೊತೆ ಎಲ್ಲ ವಿದ್ಯಾರ್ಥಿಗಳು ಸಸಿಗಳ ರಕ್ಷಣೆ ಮಾಡುವುದಾಗಿ ತಿಳಿಸಿದರು. ಹಾಗೂ ಸ್ಕೌಟ್ಸ್ ಮಾಸ್ಟರ್ ಶ್ರೀ ಆರ್.ಬಿ. ಲಂಗೋಟಿ ಅವರು ಸಸಿ ಸಂರಕ್ಷಣೆ ಬಗ್ಗೆ ಮಾರ್ಗದರ್ಶನ ನೀಡಿದರು. ಮತ್ತು ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ಸವಿತಾ ನಾಯಕ್ ಹಾಗೂ ಶಾಲೆಯ ಎಲ್ಲ ಆಡಳಿತ ಮಂಡಳಿ ಹಾಗೂ ಎಲ್ಲ ಶಿಕ್ಷಕ ಶಿಕ್ಷಕಿಯರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದರು.

* ಜೂನ್ 8ರಂದು ಜಿಲ್ಲಾ ಸ್ಕೌಟ್ಸ್ ಭವನದ ಆವರಣದಲ್ಲಿ "ವಿಶ್ವ ಪರಿಸರ" ದಿನಾಚರಣೆಯನ್ನು ಹಮ್ಮಿಕೊಳ್ಳಲಾಯಿತು. ಸದರಿ ಕಾರ್ಯಕ್ರಮಕ್ಕೆ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಗಜಾನನ ಬ. ಮನ್ನಿಕೇರಿ ರವರು ಗಿಡ ನೆಡುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ನಂತರ ಮಾತನಾಡುತ್ತ ಬೆಳಗಾವಿ ಜಿಲ್ಲೆಯ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಬೀಜದ ಉಂಡೆ ತಯಾರಿಸಿ ಬಿತ್ತುವ ಕಾರ್ಯಕ್ರಮ ಹಾಗೂ ಸಸಿ ನೆಡುವ ಕಾರ್ಯಕ್ರಮಗಳನ್ನು ಕಡ್ಡಾಯವಾಗಿ ಆಯೋಜಿಸುವಂತೆ ಸೂಚಿಸಿದರು. ಹಾಗೂ ಜಿಲ್ಲಾ ಮಟ್ಟದ ರಾಜ್ಯ ಪುರಸ್ಕಾರ ಸ್ಕೌಟ್ಸ್-ಗೈಡ್ಸ್‌ಗಳ ಪೂರ್ವಭಾವಿ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಿದ ಎಲ್ಲ ಮಕ್ಕಳು ಕನಿಷ್ಠ 2 ಗಿಡಗಳನ್ನು ದತ್ತು ಪಡೆದು ಪೋಷಿಸುವಂತೆ ತಿಳಿಸಿ ಸದರಿ ಗಿಡಗಳ ಪ್ರಗತಿಯ ಕುರಿತು ಪೋಟೋ ಸಹಿತ ಸಮಗ್ರ ವರದಿಯನ್ನು ನೀಡಲು ತಿಳಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಪ್ರಭಾವತಿ ಪಾಟೀಲ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್.ಎಂ. ನದಾಫ ಹಾಗೂ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.



* ಜೂನ್ 7 ರಿಂದ 10ರ ವರೆಗೆ ಜಿಲ್ಲಾ ಸಂಸ್ಥೆ ವತಿಯಿಂದ ಅಮೃತ ವಿದ್ಯಾಲಯ ಶಾಲೆ ಹಾಗೂ ಜಿಲ್ಲಾ ಸ್ಕೌಟ್ ಭವನದಲ್ಲಿ 2019-20 ಜಿಲ್ಲಾ ಮಟ್ಟದಲ್ಲಿ ರಾಜ್ಯ ಪುರಸ್ಕಾರ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪೂರ್ವಭಾವಿ ಪರೀಕ್ಷಾ ಶಿಬಿರವನ್ನು ಆಯೋಜಿಸಲಾಯಿತು. ಕಾರ್ಯಕ್ರಮ ಉದ್ಘಾಟನೆಯನ್ನು ಅಮೃತ ವಿದ್ಯಾಲಯ ಶಾಲೆ ಪ್ರಾಚಾರ್ಯರಾದ ಶ್ರೀ ಸುಷ್ಮ ಚರಂತಿಮಠ ಇವರು ದೀಪ ಬೆಳಗುವ ಮೂಲಕ ಶಿಬಿರ ಉದ್ಘಾಟಿಸಿದರು. ನಂತರ ಶಿಬಿರ ಉದ್ದೇಶಿಸಿ ಮಾತನಾಡುತ್ತ ಮುಂದಿನ ದಿನಗಳಲ್ಲಿ ಸ್ಕೌಟ್ಸ್-ಗೈಡ್ಸ್‌ನ ಯಾವುದೇ ಕಾರ್ಯಕ್ರಮಗಳನ್ನು ನಮ್ಮ ಶಾಲೆಯಲ್ಲಿ ಆಯೋಜಿಸಲು ಸದವಕಾಶ ನೀಡುವುದಾಗಿ ಭರವಸೆ ನೀಡಿದರು. ಕಾರ್ಯಕ್ರಮದಲ್ಲಿ ಬೆಳಗಾವಿ ಜಿಲ್ಲೆಯ ವಿವಿಧ ಶಾಲೆಗಳಿಂದ 80 ಸ್ಕೌಟ್ಸ್ ಮತ್ತು 50 ಗೈಡ್ಸ್ ಶಿಕ್ಷಕರುಗಳು ಭಾಗವಹಿಸಿದ್ದರು. ಶಿಬಿರದ ಮೇಲ್ವಿಚಾರಣೆಯನ್ನು ಜಿಲ್ಲಾ ಸಂಘಟಕರು ವಹಿಸಿದ್ದರು.

ಸಂಜೆ ನಡೆದ ಶಿಬಿರಾಗ್ನಿ ಕಾರ್ಯಕ್ರಮವನ್ನು ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಪ್ರಭಾವತಿ ಪಾಟೀಲ ಇವರು ಉದ್ಘಾಟಿಸಿ ಮಕ್ಕಳ ಮನರಂಜನಾ ಕಾರ್ಯಕ್ರಮಗಳನ್ನು ನೋಡಿ ಆನಂದಿಸಿದರು. ನಂತರ ಜಿಲ್ಲಾ ಗೈಡ್ಸ್ ಆಯುಕ್ತರು ಮಕ್ಕಳೊಂದಿಗೆ ಶಿಬಿರದಲ್ಲಿ ವಾಸ್ತವ್ಯ ಮಾಡಿದರು.

* ಜೂನ್ 13ರಂದು ನಗರದ ಕೆ.ಎಲ್.ಇ. ಮಹಾದೇವಪ್ಪಣ್ಣಾ ಮುನವಳ್ಳಿ ಶಾಲೆಯ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ತಂಡದವರು ಗೋಕಾಕ ಅರಣ್ಯ ಇಲಾಖೆಯವರ ಹಾಗೂ ಜೆ.ಸಿ.ಐ. ಸಂಸ್ಥೆಯ ಸಹಯೋಗದೊಂದಿಗೆ ನಗರದ ಹೊರವಲಯದಲ್ಲಿ ವಿವಿಧ ಬಗೆಯ ಸಸಿಗಳನ್ನು ನೆಟ್ಟು 'ವಿಶ್ವ ಪರಿಸರ' ದಿನಾಚರಣೆಯನ್ನು ಆಚರಿಸಿದರು. ಊರಿನ ಪ್ರಮುಖ ಬೀದಿಗಳಲ್ಲಿ ಸಂಚರಿಸುತ್ತಾ ವಿಶ್ವ ಪರಿಸರದ ಸಂದೇಶವನ್ನು ಸಾರಿದರು.

ಕಾರ್ಯಕ್ರಮಕ್ಕೆ ಚಾಲನೆ ನೀಡಿದ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಅನುಪಾ ಕೌಶಿಕ ಅವರು ಜಾಗತಿಕ ತಾಪಮಾನದಿಂದ ಇಡೀ ವಿಶ್ವವೇ ತತ್ತರಿಸುತ್ತಿರುವ ಇಂದಿನ ಸಂದರ್ಭದಲ್ಲಿ ಪ್ರತಿಯೊಬ್ಬ ಪ್ರಜೆಯೂ ಪರಿಸರದ



ಬಗ್ಗೆ ಕಾಳಜಿ ವಹಿಸಬೇಕಾಗಿದೆ ಎಂದರು. ಸಂದರ್ಭದಲ್ಲಿ ಸ್ಕೌಟ್ ಮಾಸ್ಟರ್ ಶ್ರೀ ಪಿ. ವೈ. ಪಾಟೀಲ, ಗೈಡ್ ಕ್ಯಾಪ್ಟನ್ ಶ್ರೀಮತಿ ಸುಜಾತಾ ತೊಂಡಿಕಟ್ಟಿ, ಕಬ್ ಮಾಸ್ಟರ್ ಚೇತನಾ ಪಾಟೀಲ, ಅಂಬಿಕಾ ಕಮ್ಮಾರ ಮತ್ತು ಫ್ಲಾಕ್ ಲೀಡರ್ ನಂದಾದೀಪಾ ಶಿರಾಳಕರ್ ಉಪಸ್ಥಿತರಿದ್ದರು.

* ಜೂನ್ 18 ರಂದು ಸ್ಥಳೀಯ ಸಂಸ್ಥೆ ರಾಮದುರ್ಗ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಹಾಗೂ ಅರಣ್ಯ ಇಲಾಖೆ ರಾಮದುರ್ಗ ಇವರುಗಳ ಸಂಯುಕ್ತಾಶ್ರಯದಲ್ಲಿ ಖಾನಪೇಟ ಸಸ್ಯ ಪಾಲನಾಲಯದಲ್ಲಿ ವಿಶ್ವ ಪರಿಸರ ದಿನಾಚರಣೆಯ ಅಂಗ್ವಾಗಿ ಸ್ಕೌಟ್ಸ್–ಗೈಡ್ಸ್‌ಗಳಿಂದ ಬೀಜದ ಉಂಡೆಗಳ ತಯಾರಿಕೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಸದರಿ ಕಾರ್ಯಕ್ರಮವನ್ನು ವಲಯ ಅರಣ್ಯ ಅಧಿಕಾರಿಗಳು ಹಾಗೂ ಶ್ರೀ ಆರ್.ಎಸ್. ಉಪ್ಪಾರ್ ಇವರು ಸಸಿಗೆ ನೀರುಣಿಸುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಎಲ್ಲಾ ಮಕ್ಕಳು ಸ್ಕೌಟ್–ಗೈಡ್ ಯುವ ಚಳುವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಂಡು ನಿಮ್ಮ ಜೀವನದಲ್ಲಿ ಶಿಸ್ತು, ಸೇವಾಮನೋಭಾವನೆ, ಧೈರ್ಯ, ಸಾಹಸದಿಂದ ಮುನ್ನುಗ್ಗಿರಿ ಎಂದು ಬೀಜದ ಉಂಡೆಗಳ ಮಹತ್ವ ಹಾಗೂ ಪರಿಸರದ ಬಗ್ಗೆ ಮಕ್ಕಳಿಗೆ ತಿಳುವಳಿಕೆ ನೀಡಿದರು.

ಕಾರ್ಯಕ್ರಮದಲ್ಲಿ ಉಪವಲಯ ಅರಣ್ಯ ಅಧಿಕಾರಿ ಶ್ರೀ ಎನ್.ಎಂ. ಯಲಿಗಾರ, ಶ್ರೀ ಆರ್.ಎಸ್. ಹೊಸಮನಿ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಂ.ಎನ್. ಗವನ್ನವರ ಹಾಗೂ ರಾಮದುರ್ಗ ತಾಲೂಕಿನ ವಿವಿಧ ಶಾಲಾ ಕಾಲೇಜುಗಳಿಂದ 100 ಜನ ಮಕ್ಕಳು ಹಾಗೂ ಶಿಕ್ಷಕರುಗಳು ಭಾಗವಹಿಸಿದ್ದರು.



## Bengaluru North

The Shivajinagar Local Association organised World Environment Day Celebration on 8th June 2019 at Shanthi Children High School, Jeevanhalli, Bharthnagar Area.




Chief Guest was Smt. Anna counsellor of Jeevanahalli, Bharathnagar area. Mrs Kanakalatha, Principal, Secretary Mr. Rajiv, Smt. Arul Mary H.M., B. Revathy. LT (B) Scouts & Guides, Bulbuls were present. 150 Scouts-Guides were present. and went on the Route March to Orion Mala. Programme was Co-ordinated by Secretary Krupa Vijay ALT (G).

## ಬೆಂಗಳೂರು ಪೂರ್ವ

ಬೆಂಗಳೂರು ಪೂರ್ವ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ವಿಶ್ವ ಪರಿಸರ ದಿನಾಚರಣೆ ಪ್ರಯುಕ್ತ ಆನೇಕಲ್ ಪಟ್ಟಣದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಆವರಣದಲ್ಲಿ ಸಸಿ ನೆಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಉದ್ಘಾಟಿಸಿ ಮಾತನಾಡುತ್ತಾ ಜಾಗತೀಕರಣ ಮತ್ತು ಅಭಿವೃದ್ಧಿಯ ಹೆಸರಿನಲ್ಲಿ ಮನುಷ್ಯ ನಿರಂತರವಾಗಿ ವೃಕ್ಷಗಳನ್ನು ಕಡಿಯುತ್ತಿರುವ ಪರಿಣಾಮ ಪೃಥ್ವಿಯ ತಾಪಮಾನ ಗಣನೀಯ ಮಟ್ಟದಲ್ಲಿ ಏರಿಕೆಯಾಗುತ್ತಿದೆ. ಇವೆಲ್ಲದಕ್ಕೂ ನೇರವಾಗಿ ಮನುಷ್ಯನೇ ಕಾರಣವಾಗುತ್ತಿದ್ದು ಈಗಲಾದರೂ ಮನುಕುಲ ಎಚ್ಚೆತ್ತುಕೊಳ್ಳದಿದ್ದರೆ ಮುಂದಿನ ದಿನಗಳಲ್ಲಿ ಭಾರೀ ಬೆಲೆ





ತೆರಬೇಕಾಗುತ್ತದೆ ಎಂದು ನುಡಿದರು. ಜಿಲ್ಲಾ ಖಜಾಂಚಿ ಮಾತನಾಡಿ, ಈ ನಿಟ್ಟಿನಲ್ಲಿ ಸರ್ಕಾರದ ಜೊತೆಗೆ ಸಂಘ ಸಂಸ್ಥೆಗಳು ಹಾಗೂ ಸಾರ್ವಜನಿಕರೂ ಸಹ ಸ್ವಯಂ ಪ್ರೇರಿತರಾಗಿ ಕೈಜೋಡಿಸಬೇಕು ಎಂದು ನುಡಿದರು.

ರೋವರ್ ಸ್ಕೌಟ್ ಲೀಡರ್ ಶ್ರೀ ಎನ್. ಅಮೋಘವರ್ಷ, ಸ್ಕೌಟರ್‌ಗಳಾದ ಶ್ರೀ ಆರ್. ಮುನಿರಾಜ, ಶ್ರೀಯುತರಾದ ಲಾರೆನ್ಸ್ ಪ್ರದೀಪ್, ಗೈಡರ್‌ಗಳಾದ ಶ್ರೀಮತಿ ಜಿ.ಪಿ. ಫಿಲೋಮಿನಾ, ಶ್ರೇಯ ಎಸ್. ಬುಲ್ಲಾ ಮೊದಲಾದವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

## ಬೆಂಗಳೂರು ಗ್ರಾಮಾಂತರ

ಭಾರತ್ ಸ್ಕೌಟ್ಸ್-ಗೈಡ್ಸ್ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಜಿಲ್ಲಾಡಳಿತ, ಜಿಲ್ಲಾ ಆಯುಷ್ ಇಲಾಖೆ ಹಾಗೂ ವಿವಿಧ ಸಂಘ ಸಂಸ್ಥೆಗಳ ವತಿಯಿಂದ ಆಯೋಜಿಸಿದ್ದ ಜಿಲ್ಲಾ ಮಟ್ಟದ 5ನೇ ಅಂತರಾಷ್ಟ್ರೀಯ ಯೋಗ ದಿನಾಚರಣೆ ಮತ್ತು 2019-20ನೇ ಸಾಲಿನ ಸ್ಕೌಟ್ಸ್-ಗೈಡ್ಸ್ ವಾರ್ಷಿಕ ಕ್ರಿಯಾ ಯೋಜನೆ ಪುಸ್ತಕ ಬಿಡುಗಡೆ ಕಾರ್ಯಕ್ರಮವನ್ನು ಸಸಿಗೆ ನೀರೆರೆಯುವ ಮೂಲಕ ಜಿಲ್ಲಾ ಪಂಚಾಯಿತಿ ಅಧ್ಯಕ್ಷೆ ಶ್ರೀಮತಿ ಜಯಮ್ಮ ಲಕ್ಷ್ಮೀನಾರಾಯಣ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಜಿಲ್ಲಾದಿಕಾರಿ ಶ್ರೀ ಕರೀಗೌಡ, ದೇವನಹಳ್ಳಿ ವಿಧಾನಸಭಾ ಕ್ಷೇತ್ರದ ಮಾನ್ಯ ಶಾಸಕ ಶ್ರೀ ನಿಸರ್ಗ ನಾರಾಯಣಸ್ವಾಮಿ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಬಿ.ಕೆ. ಶಿವಪ್ಪ, ತಹಸೀಲ್ದಾರ್ ಶ್ರೀ ಕೇಶವಮೂರ್ತಿ, ತಾಲ್ಲೂಕು ಪಂಚಾಯ್ತಿ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಮುರುಡಯ್ಯ, ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕ ಶ್ರೀ ಕೃಷ್ಣಮೂರ್ತಿ, ಶಿಕ್ಷಣಾಧಿಕಾರಿ ಶ್ರೀಮತಿ ಗಾಯಿತ್ರಿದೇವಿ, ಯುವಸಬಲೀಕರಣ ಇಲಾಖೆ ಜಿಲ್ಲಾಧಿಕಾರಿ ಶ್ರೀಮತಿ ದೇವಿಕರಾಣಿ, ಸರ್ಕಲ್ ಇನ್ಸ್ಪೆಕ್ಟರ್ ಶ್ರೀ ಶಿವಕುಮಾರ್ ಸೇರಿದಂತೆ ಎಲ್ಲಾ ಇಲಾಖಾಧಿಕಾರಿಗಳು ಮತ್ತು ವಿವಿಧ ಸಂಘ ಸಂಸ್ಥೆಗಳ ಪದಾಧಿಕಾರಿಗಳು ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ಪದಾಧಿಕಾರಿಗಳು ಹಾಗು ಸ್ಕೌಟ್ಸ್-ಗೈಡ್ಸ್ ಹಾಜರಿದ್ದರು.

* ಭಾರತ್ ಸ್ಕೌಟ್ಸ್-ಗೈಡ್ಸ್, ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ ವತಿಯಿಂದ ಆಯೋಜಿಸಿದ್ದ ಜಿಲ್ಲಾ ಮಟ್ಟದ 2019-20 ನೇ ಸಾಲಿನ ಸ್ಕೌಟ್ಸ್-ಗೈಡ್ಸ್ ವಾರ್ಷಿಕ ಕ್ರಿಯಾ ಯೋಜನೆ ಪುಸ್ತಕ ಬಿಡುಗಡೆ ಮತ್ತು ಪರಿಸರ ದಿನಾಚರಣೆ ಕಾರ್ಯಕ್ರಮದಲ್ಲಿ ದೇವನಹಳ್ಳಿ ಎಸ್.ಎಲ್.ಎಸ್. ಶಾಲಾ ಆವರಣದಲ್ಲಿ ಸಸಿಗಳನ್ನು ನೆಡಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಬಿ.ಕೆ. ಶಿವಪ್ಪ, ಜಿಲ್ಲಾ ಕಾರ್ಯದರ್ಶಿ ಶ್ರೀನಿವಾಸ ಪ್ರಸಾದ್, ಜಿಲ್ಲಾ ಸಹಾಯಕ ಆಯುಕ್ತ ಶ್ರೀ ವೆಂಕಟರಾಜ, ಶ್ರೀ ಶ್ರೀಕಾಂತ್, ದೇವನಹಳ್ಳಿ ತಾಲ್ಲೂಕು ಕಾರ್ಯದರ್ಶಿ ಶ್ರೀ ಸೀತಾರಾಮು, ಶ್ರೀ ಎಸ್.ಜಿ.ವಿ. ಅರುಣ್ ಕುಮಾರ್, ರೇಂಜರ್ ಮತ್ತು ಶಾಲಾ ಸಿಬ್ಬಂದಿವರ್ಗ ಹಾಜರಿದ್ದರು.






## ಬೀದರ್

ಜಿಲ್ಲಾ ಸಂಸ್ಥೆಯ ವತಿಯಿಂದ ವಿಶ್ವಪರಿಸರ ದಿನಾಚರಣೆಯನ್ನು ನಗರದ ಜ್ವಾಯ್ ಪಬ್ಲಿಕ್ ಶಾಲೆ ದುಮ್ಮಸಾಪೂರದಲ್ಲಿ ಆಯೋಜಿಸಲಾಗಿದ್ದು ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಗೌತಮ ಅರಳಿ ಇವರು ವಹಿಸಿ ಮಾತನಾಡುತ್ತ ಇಂದಿನ ಯುವ ಪೀಳಿಗೆಯು ಮರಗಳನ್ನು ನೆಟ್ಟು ಪರಿಸರಕ್ಕೆ ಪೂರಕವಾದ ವಾತಾವರಣವನ್ನು ನಿರ್ಮಿಸಲು ತಿಳಿಸಿದರು.

ಜಿಲ್ಲಾ ಕಾರ್ಯದರ್ಶಿಗಳಾದ ಡಾ॥ ಎಚ್.ಬಿ. ಭರಶೆಟ್ಟಿಯವರು ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್‌ಗಳು ಸಮಾಜದ ಇತರ ಸಂಘಸಂಸ್ಥೆಗಳು ಸೇರಿ ಪರಿಸರ ಸ್ನೇಹಿಯಾಗಿ ಕೆಲಸ ಮಾಡಲು ತಿಳಿಸಿದರು. ಪ್ರತಿ ಸ್ಕೌಟ್ಸ್-ಗೈಡ್ಸ್‌ಗಳು ಕನಿಷ್ಠ 5 ಗಿಡಗಳನ್ನಾದರು ನೆಟ್ಟು ಪೋಷಿಸಲು ತಿಳಿಸದರು. ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಕೆ.ಎಸ್. ಚಳಕಾಪೂರೆಯವರು ಮಾತನಾಡಿ ವಿದ್ಯಾಭ್ಯಾಸದ ಜೊತೆಗೆ ಪರಿಸರ ಪ್ರೇಮವನ್ನು ಬೆಳೆಸಿಕೊಂಡು ಮಕ್ಕಳು ಕುಟುಂಬದಲ್ಲಿ ಸ್ನೇಹ ಮತ್ತು ಪ್ರೀತಿಯಿಂದ ಬದುಕುವ ಕಲೆಯನ್ನು ತಿಳಿಸಿಕೊಟ್ಟರು. ಜ್ವಾಯ್ ಪಬ್ಲಿಕ್ ಶಾಲೆಯ ಕಾರ್ಯದರ್ಶಿಗಳಾದ ಶ್ರೀ ಚಂದ್ರಕಾಂತ ಪಾಟೀಲ ಮಾತನಾಡಿ ನಮ್ಮ ಶಾಲೆಯಲ್ಲಿ ಈಗಾಗಲೇ ವಿವಿಧ ಜಾತಿಯ 500ಕ್ಕೂ ಹೆಚ್ಚು ಗಿಡಗಳನ್ನು ಬೆಳೆಸಲಾಗಿದ್ದು ಮುಂಬರುವ ದಿನಗಳಲ್ಲಿ ಶಾಲೆಯ ಆವರಣದಲ್ಲಿ ಗಿಡಮರಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆಸಿ ಪೋಷಿಸಲಾಗುವುದೆಂದು ತಿಳಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಶರಣಪ್ಪ ಬರೂರ, ಹುಮನಾಬಾದ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ, ಶ್ರೀ ಚಂದ್ರಕಾಂತ ಬೆಳಕುಣೆ, ಬೀದರ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಹಾಜರಿದ್ದರು. ಈ ಸಂದರ್ಭದಲ್ಲಿ ವಿವಿಧ ಜಾತಿಯ 50 ಗಿಡಗಳನ್ನು ನೆಡಲಾಯಿತು. ಶಾಲೆಯ ಸ್ಕೌಟ್ ಮಾಸ್ಟರ್ ಶ್ರೀ ಮುಖೇಶ ಅವರು ವಂದನಾರ್ಪಣೆ ಮಾಡಿದರು.



## ಚಾಮರಾಜನಗರ

ಜೂನ್ 5 ಮತ್ತು 6 ರಂದು ಚಾಮರಾಜನಗರ, ಸ್ಥಳೀಯ ಸಂಸ್ಥೆ ಯಳಂದೂರು ಇವರ ನೇತೃತ್ವದಲ್ಲಿ ಶ್ರೀ ಶಿವಪಾರ್ವತಿ ದೇವಾಲಯ ಆಲ್ಕೆರೆ ಅಗ್ರಹಾರ, ಮಲಾರಪಾಳ್ಯ ಯಳಂದೂರು ತಾಲ್ಲೂಕು ಇಲ್ಲಿ 35 ಅಡಿ ಎತ್ತರದ ಶಿವನ ಪ್ರತಿಮೆ ಹಾಗೂ ನಂದಿ ಪ್ರತಿಮೆ ಪ್ರತಿಷ್ಠಾಪನೆಯಲ್ಲಿ ರೋವರ್ಸ್ ರೇಂಜರ್‌ಗಳಿಂದ ಸೇವಾ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದಲ್ಲಿ ಹೂಗಳನ್ನು ಕಟ್ಟುವುದು ದೇವಾಲಯಕ್ಕೆ ಅಲಂಕಾರ, ಹೋಮ ಕುಂಡದ ಸಿದ್ಧತೆ, ಭಕ್ತಾದಿಗಳಿಗೆ ಮಂಗಳಾರತಿ ನೀಡುವುದು ಹಾಗೂ ದೇವಾಲಯದ ಸುತ್ತಲೂ ಮತ್ತು ಭೋಜನಾಲಯ ಆವರಣದಲ್ಲಿ ಸ್ವಚ್ಛತೆ ಮಾಡಲಾಯಿತು.



25 ರೋವರ್ಸ್-ರೇಂಜರ್ಸ್ ಮತ್ತು ಸ್ಕೌಟ್‌ಗಳು ಸೇವೆ ಸಲ್ಲಿಸಿದರು. ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ವಿ.ಎಂ. ರಾಮಚಂದ್ರ, ಜಿಲ್ಲಾ ಸಂಘಟಕಿ ಶ್ರೀಮತಿ ಕಮಲಮ್ಮ, ರೋವರ್ ಸ್ಕೌಟ್ ಲೀಡರ್ ಶ್ರೀ ಎಸ್. ಪ್ರದೀಪ್ ಕಾರ್ಯಕ್ರಮದಲ್ಲಿ ಹಾಜರಿದ್ದರು.

* ಚಾಮರಾಜನಗರ ಜಿಲ್ಲಾ ಸ್ಥಳೀಯ ಸಂಸ್ಥೆ ಯಳಂದೂರು ಹಾಗೂ ಸಾಮಾಜಿಕ ವಲಯ ಅರಣ್ಯ ಯಳಂದೂರು ಇವರ ನೇತೃತ್ವದಲ್ಲಿ ಜೂನ್ 7 ರಂದು "ವಿಶ್ವ ಪರಿಸರ ದಿನಾಚರಣೆ" ಕಾರ್ಯಕ್ರಮದ ಅಂಗವಾಗಿ ಮಲಾರಪಾಳ್ಯ ಗ್ರಾಮದ ಆಮೆಕೆರೆ ರಸ್ತೆಯ ಇಕ್ಕೆಲಗಳಲ್ಲಿ ಗಿಡಗಳನ್ನು ನೆಡುವ ಕಾರ್ಯಕ್ರಮ ಜರುಗಿತು. ಈ ಕಾರ್ಯಕ್ರಮದಲ್ಲಿ ಜೈಹಿಂದ್ ಓಪನ್ ಸ್ಕೌಟ್ಸ್ ಗ್ರೂಪ್‌ನ ಸ್ಕೌಟ್ಸ್ ಮತ್ತು ರೋವರ್ಸ್ ಹಾಗೂ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳು ಸ್ಥಳೀಯರು ಮತ್ತು



ಸಾಮಾಜಿಕ ವಲಯ ಅರಣ್ಯ ಇಲಾಖೆಯ ಸಿಬ್ಬಂದಿ ವರ್ಗದವರು ಹಾಗೂ ರೋವರ್ ಸ್ಕೌಟ್ ಲೀಡರ್ ಶ್ರೀ ಎಸ್. ಪ್ರದೀಪ ಕಾರ್ಯಕ್ರಮದಲ್ಲಿ ಹಾಜರಿದ್ದರು.

* ಸ್ವಚ್ಛ ಭಾರತ್ ಮಿಷನ್, ಜಿಲ್ಲಾ ಪಂಚಾಯ್ ಚಾಮರಾಜನಗರ, ತಾಲ್ಲೂಕು ಪಂಚಾಯತ್ ಯಳಂದೂರು ಮತ್ತು ಗ್ರಾಮ ಪಂಚಾಯಿತಿಯ ಸಹಯೋಗದಲ್ಲಿ ಜೂನ್ 11 ರಿಂದ ಜುಲೈ 10ರ ವರೆಗೆ ಆಯೋಹಿಸುತ್ತಿರುವ "ಸ್ವಚ್ಛ ಮೇವ ಜಯತೇ" ಆಂದೋಲನ ಕಾರ್ಯಕ್ರಮಕ್ಕೆ ಇಂದು ಕೆಸ್ತೂರು ಗ್ರಾಮದಲ್ಲಿ ಮಾಜಿ ಶಿಕ್ಷಣ ಸಚಿವರು, ಹಾಲಿ ಕೊಳ್ಳೇಗಾಲ ಶಾಸಕರಾದ ಶ್ರೀ ಎನ್. ಮಹೇಶ್ ರವರು ಕಾರ್ಯಕ್ರಮವನ್ನು ಗಿಡ ನೆಡುವುದರ ಮೂಲಕ ಮತ್ತು ಸ್ವಚ್ಛ ಮೇವ ಜಯತೇ ಆಂದೋಲನ ರಥಕ್ಕೆ ಪುಷ್ಪಾರ್ಚನೆ ಮಾಡಿ ಚಾಲನೆ ನೀಡಿದರು. ವಿವಿಧ ಇಲಾಖೆಗಳ ಅಧಿಕಾರಿಗಳು ಗ್ರಾಮ ಪಂಚಾಯಿತಿ ಅಧ್ಯಕ್ಷ, ಸದಸ್ಯರು, ಶಾಲಾ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ವಯಂ ಸೇವಕರು ಹಾಗೂ ರೋವರ್ ಸ್ಕೌಟ್ ಲೀಡರ್ ಶ್ರೀ ಎಸ್. ಪ್ರದೀಪ್ ರವರು ಕಾರ್ಯಕ್ರಮದಲ್ಲಿ ಹಾಜರಿದ್ದರು.

* ಭಾರತ್ ಸ್ಕೌಟ್ಸ್-ಗೈಡ್ಸ್ ಚಾಮರಾಜನಗರ, ಸ್ಥಳೀಯ ಸಂಸ್ಥೆ ಯಳಂದೂರು ಮತ್ತು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮಲಾರಪಾಳ್ಯ ಇವರ ನೇತೃತ್ವದಲ್ಲಿ 12 ಜೂನ್ ರಂದು "ವಿಶ್ವ ಬಾಲಕಾರ್ಮಿಕ ವಿರೋಧಿ ದಿನಾಚರಣೆ" ಕಾರ್ಯಕ್ರಮವು ಜರುಗಿತು, ಈ ಕಾರ್ಯಕ್ರಮದಲ್ಲಿ ಶಾಲಾ ಸಹಶಿಕ್ಷಕರಾದ ಶ್ರೀ ಮಹದೇವಪ್ರಸಾದ್ ರವರು ಮಕ್ಕಳಿಗೆ ಬಾಲಕಾರ್ಮಿಕ ಪದ್ಧತಿ ಬಗ್ಗೆ ಉಪನ್ಯಾಸ ನೀಡಿದರು. ಈ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್ ವಿದ್ಯಾಥಿಗಳು ಹಾಗೂ ರೋವರ್ ಸ್ಕೌಟ್ ಲೀಡರ್ ಶ್ರೀ ಎಸ್. ಪ್ರದೀಪ್ ಕಾರ್ಯಕ್ರಮದಲ್ಲಿ ಹಾಜರಿದ್ದರು.

## ಚಿಕ್ಕಮಗಳೂರು

ರಾಜ್ಯ ಸಂಸ್ಥೆಯ ನಿರ್ದೇಶನದಂತೆ 4-5 ಗಂಟೆಗಳ ಕಾಲದಲ್ಲಿ ಒಂದು ಪ್ರಾರಂಬಿಕರ ಶಿಬಿರ ನಡೆಸಬೇಕೆಂಬ ಉದ್ದೇಶದಿಂದ ಶಾಲೆಗಳನ್ನು ಸಂಪರ್ಕಿಸಿದಾಗ ಕೆಲ ಶಾಲೆಗಳ ಮುಖ್ಯಸ್ಥರು ದಳ ಪ್ರಾರಂಭಿಸಲು ಬೇಕಾಗುವ ಮುಖ್ಯ ಅಂಶಗಳನ್ನು ಕೂಡಾ ಅಳವಡಿಸಿಕೊಳ್ಳುವುದು ಸೂಕ್ತ ಎನ್ನುವ ಸಲಹೆ ಮೇರೆಗೆ ಮತ್ತು ಶಾಲೆಗಳಿಗೆ ರಜೆ ಇದ್ದ ಕಾರಣ ಒಂದೂವರೆ ದಿನಗಳ ಪ್ರಾರಂಭಿಕ ಶಿಬಿರ (Beginners Course) ಅನ್ನು ದಿನಾಂಕ 24-5-2019 ರಂದು ಮಾಡೆಲ್ ಆಂಗ್ಲ ಪ್ರೌಢಶಾಲೆ, ಉಪ್ಪಳಿಯಲ್ಲಿ ಹಮ್ಮಿಕೊಳ್ಳಲಾಗಿತ್ತು.

ಪ್ರಾರಂಭಿಕ ಶಿಬಿರ (Beginners Course)ದಲ್ಲಿ ಕೊಟ್ಟಿರುವ ವಿಷಯಗಳ ಜೊತೆಯಲ್ಲಿ ಕೆಲವು ಕೌಶಲ್ಯಗಳನ್ನು ಕೂಡ ಅಳವಡಿಸಿಕೊಳ್ಳಲಾಗಿತ್ತು. ಉದಾಹರಣೆಗೆ ಪ್ರಾರಂಭಿಕ ಅಥವಾ ಪ್ರಥಮ ಸೋಪಾನದಲ್ಲಿ ಬರುವ ಗಂಟುಗಳು, ಸಂಸ್ಥೆಯ ರಚನೆಯ ಬಗ್ಗೆ ವಿವರ, ಮಕ್ಕಳು ಮತ್ತು ವಯಸ್ಕರ ಹಂತ ಹಂತದ ಬೆಳವಣಿಗೆ, ಟ್ರೂಪ್ ಮೀಟಿಂಗ್ ಹೇಗಿರಬೇಕು, ಟ್ರೂಪ್ ಮೀಟಿಂಗ್ ಪ್ರಾತ್ಯಕ್ಷತೆ, ಆಟಗಳ ಮಹತ್ವ ಮತ್ತು ನಾಯಕತ್ವದ ಗುಣಗಳು, ವಿವಿಧ ರೀತಿಯ ಆಟಗಳು, ಪ್ರಕೃತಿ ಅಧ್ಯಯನದ ಪ್ರಾಮುಖ್ಯತೆ (ಸ್ಕೌಟಿಂಗ್ ಮತ್ತು ಗೈಡಿಂಗ್‌ನಲ್ಲಿ) ಪ್ರಾವೀಣ್ಯತಾ ಪದಕಗಳು ಮತ್ತು ಅವುಗಳ ಉದ್ದೇಶ, ಸ್ಕೌಟ್ ಗೈಡ್ ಸಮಾರಂಭಗಳು ಹಾಗು ಇತರೆ ವಿಷಯಗಳ ಬಗ್ಗೆ ಮಾಹಿತಿ ನೀಡಲಾಯಿತು.

ವಿವಿಧ ಶಾಲೆಗಳಿಂದ ಸುಮಾರು 30 ಶಿಕ್ಷಕರು ಭಾಗವಹಿಸಿದ್ದರು ಮತ್ತು ಅವರು ತರಬೇತಿಯ ಬಗ್ಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಜಿಲ್ಲಾ ಸಂಸ್ಥೆಯ ವತಿಯಿಂದ ಎಲ್ಲರಿಗೂ ಮಧ್ಯಾಹ್ನದ ಊಟದ ವ್ಯವಸ್ಥೆ ಮಾಡಲಾಗಿತ್ತು. ಮಾಡೆಲ್ ಶಾಲೆಯ ಸ್ಕೌಟರ್ ಮತ್ತು ವೃಕ್ಷಮಣಿದಾರಿ ಶ್ರೀ ಟಿ.ಎಸ್. ನಿರಂಜನ, ಶಿಬಿರದ ನಾಯಕತ್ವ ವಹಿಸಿದ್ದರು. ತರಬೇತುದಾರರಾಗಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎನ್. ಷಡಕ್ಷರಿ, ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ಸಂಧ್ಯಾರಾಣಿ, ಜಿಲ್ಲಾ ಸಹಾಯಕ ಕಾರ್ಯದರ್ಶಿ ಶ್ರೀ ನೀಲಕಂಠಾಚಾರ್, ಸಂಘಟನಾಧಿಕಾರಿ ಶ್ರೀ ಬಿ.ಎನ್. ಕಿರಣ್ ಕುಮಾರ್, ಮತ್ತಿತರರು ಪಾಲ್ಗೊಂಡಿದ್ದರು.

ಉದ್ಘಾಟನೆ ನೆರವೇರಿಸಿದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎನ್. ಷಡಕ್ಷರಿ ಭವಿಷ್ಯದ ಜವಾಬ್ದಾರಿಯುತ ಪ್ರಜೆಗಳನ್ನು ತಯಾರು ಮಾಡುವುದರ ಮೂಲಕ ರಾಷ್ಟ್ರ ಸೇವೆ ಮಾಡುತ್ತಿದ್ದೇವೆಂಬ ತೃಪ್ತಿ ನಮ್ಮೆಲ್ಲರಲ್ಲಿರಲಿ ಎಂದರು.

ಮೇ 25ರಂದು ಸಮಾರೋಪ ಸಮಾರಂಭದಲ್ಲಿ ಭುವನೇಂದ್ರ ಶಾಲೆಯ ಪ್ರಾಂಶುಪಾಲ ಶ್ರೀ ದೇವರಾಜ್, ಮುಖ್ಯ ಶಿಕ್ಷಕಿ ಶ್ರೀಮತಿ ಜಮಿಲಾ, ಮಾಡೆಲ್ ಶಾಲೆಯ ಮುಖ್ಯ ಶಿಕ್ಷಕ ಶ್ರೀ ಅಬ್ದುಲ್ ಮಲಿಕ್ ಉಪಸ್ಥಿತರಿದ್ದರು.

* ಅರಣ್ಯ ಸಂಪತ್ತು ದಿನೇ ದಿನೇ ಕ್ಷೀಣಿಸುತ್ತಿದೆ. ಇದಕ್ಕೆ ಕಾರಣ ಮನುಷ್ಯನ ದುರಾಸೆ. ಇದೇ ರೀತಿ ಮುಂದುವರೆದರೆ ನೀರಿಗಾಗಿ ಆಹಾಕಾರ ಸೃಷ್ಟಿಯಾದೀತು. ಆದ್ದರಿಂದ ಮಕ್ಕಳು ಈಗಿನಿಂದಲೇ ಪರಿಸರದ ಮಹತ್ವ ಅರಿತು ಪ್ರತಿಯೊಬ್ಬರು ಒಂದು ಗಿಡನೆಟ್ಟು ಅದನ್ನು ಪೋಷಿಸಬೇಕು ಎಂದು ಚಿಕ್ಕಮಗಳೂರು ಜಿಲ್ಲಾ ಕೌಟುಂಬಿಕ ನ್ಯಾಯಾಲಯದ ಜಿಲ್ಲಾ ನ್ಯಾಯಾಧೀಶ ಶ್ರೀ ಡಿ.ಟಿ. ದೇವೇಂದ್ರರವರು ನುಡಿದರು.

ಉಪ್ಪಳ್ಳಿಯ ಮಾಡೆಲ್ ಶಾಲೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಹಾಗೂ ಮಾಡೆಲ್ ಶಾಲೆಯ ವತಿಯಿಂದ ಹಮ್ಮಿಕೊಳ್ಳಲಾಗಿದ್ದ ವಿಶ್ವಪರಿಸರ ದಿನಾಚರಣೆಯ ಸಮಾರಂಭವನ್ನು ಗಿಡಕ್ಕೆ ನೀರೆರೆಯುವುದರ ಮೂಲಕ ಉದ್ಘಾಟಿಸಿ ಮಾತನಾಡಿದರು.



ಪ್ರಮುಖ ಸಿವಿಲ್ ನ್ಯಾಯಾಧೀಶರಾದ ಶ್ರೀ ಸಿದ್ಧರಾಮಪ್ಪನವರು ಮಾತನಾಡಿ 1982ರಿಂದ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸುತ್ತಾ ಬಂದಿದ್ದರೂ ಅದು ನಿರೀಕ್ಷಿತ ಫಲ ಕೊಡದಿರುವುದು ವಿಷಾದಕರ ಎಂದರು.

ಮತ್ತೋರ್ವ ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಅರಣ್ಯ ವಲಯ ಅಧಿಕಾರಿಯಾದ ಶ್ರೀಮತಿ ಶಿಲ್ಪ ಮಾತನಾಡಿ ಪರಿಸರ ಸಂರಕ್ಷಣೆಗಾಗಿ ಈ ಬಾರಿ ವಿಶ್ವ ಸಂಸ್ಥೆ "ವಾಯುಮಾಲಿನ್ಯವನ್ನು ಹಿಮ್ಮೆಟ್ಟಿಸಿ" ಎನ್ನುವ ಕರೆ ಕೊಟ್ಟಿದ್ದು, ವಾಯುಮಾಲಿನ್ಯವನ್ನು ಹೆಚ್ಚುಮಾಡುವ ಮತ್ತು ಗಾಳಿಯಲ್ಲಿ ವಿಷಪೂರಿತ ಅಂಶಗಳು ಸೇರುವುದನ್ನು ತಡೆಗಟ್ಟಲು ನಾವೆಲ್ಲಾ ಹೆಚ್ಚು ಹೆಚ್ಚು ಮರಗಳನ್ನು ನೆಡಬೇಕು ಎಂದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಸ್ಕೌಟ್ ಮುಖ್ಯ ಆಯುಕ್ತ, ಶ್ರೀ ಎಂ.ಎನ್. ಷಡಕ್ಷರಿ ಮಾತನಾಡಿ ಜಿಲ್ಲೆಯಲ್ಲಿ ಅರಣ್ಯೀಕರಣದ ಬಗ್ಗೆ ಮಕ್ಕಳಲ್ಲಿ ಅರಿವು ಮೂಡಿಸಲು ಸುಮಾರು ಎರಡು ಲಕ್ಷ ಬೀಜದುಂಡೆ ತಯಾರಿಸುವ ಮತ್ತು ಅದನ್ನು ಸೂಕ್ತ ಸಮಯದಲ್ಲಿ ಗುಡ್ಡಗಳಲ್ಲಿ ಬಿತ್ತಲು ಯೋಜನೆ ಹಾಕಿಕೊಳ್ಳಲಾಗಿದೆ ಎಂದರು.

ಪರಿಸರ ದಿನಾಚರಣೆಯ ಅಂಗವಾಗಿ ಶಾಲೆಯಲ್ಲಿ ವಿವಿಧ ಸ್ಪರ್ಧೆಗಳನ್ನು ನಡೆಸಿ ಬಹುಮಾನ ವಿತರಿಸಲಾಯಿತು. ಪರಿಸರ ರಸಪ್ರಶ್ನೆ, ಹಕ್ಕಿಗಳನ್ನು ಮತ್ತು ಮರಗಳನ್ನು ಗುರುತಿಸುವುದು, ನೀರಿನ ಮಾಲಿನ್ಯ ತಡೆಯುವ ಬಗೆ "ಎನ್ನುವ ಬಗ್ಗೆ ಪ್ರಬಂಧ ಸ್ಪರ್ಧೆ ಮತ್ತು ವಿವಿಧ ಹಂತಗಳ ಬಗ್ಗೆ ಮಕ್ಕಳಿಗೆ ಚಿತ್ರ ಬಿಡಿಸುವ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು.

ಕಾರ್ಯಕ್ರಮದಲ್ಲಿ ಶಾಲಾ ಮುಖ್ಯ ಶಿಕ್ಷಕ ಶ್ರೀ ಅಬ್ದುಲ್ ಮಲಿಕ್, ಅರಣ್ಯ ಇಲಾಖೆಯ ಅಧಿಕಾರಿಗಳು, ಮತ್ತಿತರರು ಹಾಜರಿದ್ದರು. ಕುಮಾರಿ ಸೊನಾಲಿ ಸ್ವಾಗತಿಸಿ ಶ್ರೀಮತಿ ರುಕ್ಸಾರ್‌ಭಾನು ವಂದಿಸಿದರು, ಶಿಕ್ಷಕಿ ಶ್ರೀಮತಿ ಸುಪ್ರಿಯಾ ಕಾರ್ಯಕ್ರಮ ನಿರೂಪಿಸಿದರು.

## ಚಿತ್ರದುರ್ಗ

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ. ರೇವಣಸಿದ್ದಪ್ಪ ಮಕ್ಕಳಿಗೆ ಉಪಯುಕ್ತವಾದ ರೀತಿಯಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು ಎಂದು ಜೂನ್ 12ರಂದು ಚಿತ್ರದುರ್ಗ ಜಿಲ್ಲಾ ಸಂಸ್ಥೆ ವತಿಯಿಂದ ದಿ॥ ಎಸ್. ನಿಜಲಿಂಗಪ್ಪನವರ ಸ್ಮಾರಕ ಭವನದಲ್ಲಿ ಹಮ್ಮಿಕೊಂಡಿದ್ದ ಅಭಿವೃದ್ಧಿ ಮತ್ತು ತಂತ್ರಾಂಶ ಕಾರ್ಯಾಗಾರ ಉದ್ಘಾಟಿಸಿ ಮಾತನಾಡಿದರು.

ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಎ. ಲಿಂಗಾರೆಡ್ಡಿ ಮಾತನಾಡಿ ಯಾವುದೇ ಒಂದು ಕಾರ್ಯಕ್ರಮ ನಡೆಯಬೇಕಾದರೆ ನಿರ್ದಿಷ್ಟವಾದ ಯೋಜನೆ ಇರಬೇಕು ಹಾಗಾದಾಗ ಮಾತ್ರ ಎಲ್ಲಿ ಲೋಪವಾಗಿದೆ ಎನ್ನುವುದನ್ನು ತಿಳಿದುಕೊಂಡು





ತಪ್ಪುಗಳು ಸರಿಪಡಿಸಿಕೊಳ್ಳಲು ಸಹಕಾರಿಯಾಗಲಿದೆ ಎಂದರು. ಜಿಲ್ಲೆಯ 6 ತಾಲ್ಲೂಕುಗಳಲ್ಲಿ ಕಾರ್ಯಕಾರಿ ಸಭೆ ನಡೆಸಬೇಕು ಎಂದರು. ಮಕ್ಕಳನ್ನು ಪ್ರೋತ್ಸಾಹಿಸುವ ಹೊಣೆಗಾರಿಕೆ ಶಿಕ್ಷಕರ ಮೇಲಿದೆ ಎಲ್ಲಾ ಕಾರ್ಯಕ್ರಮಗಳು ಡಿಸೆಂಬರ್ ಒಳಗೆ ಪೂರ್ಣಗೊಳಿಸಬೇಕು ಎಂದು ಸೂಚಿಸಿದರು.

ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಚಳ್ಳಕೆರೆ ಯರ್ರಿಸ್ವಾಮಿ ಮಾತನಾಡಿ, ಗಣತಿಯಲ್ಲಿ ಜಿಲ್ಲೆ ಹಿಂದುಳಿದಿದ್ದು, ಆತ್ಮ ವಿಮರ್ಶೆ ಮಾಡಿಕೊಳ್ಳಲು ಇಂತಹ ಕಾರ್ಯಾಗಾರಗಳು ಅಗತ್ಯ ಎಂದು ತಿಳಿಸಿದರು. ಕಳೆದ ಸಾಲಿನಲ್ಲಿ ಗಣತಿಯಲ್ಲಿ ಶೇ. 84% ಗುರಿ ತಲುಪಿದ್ದೇವೆ. ಚಿತ್ರದುರ್ಗ ಜಿಲ್ಲೆಯಲ್ಲಿ 457 ಶಾಲೆಗಳಲ್ಲಿ ಸ್ಕೌಟ್ ಘಟಕ ತೆರೆಯಬಹುದು. 49,600 ಮಕ್ಕಳನ್ನು ಜಿಲ್ಲೆಯಲ್ಲಿ ನೋಂದಣಿ ಮಾಡಿಸುವ ಗುರಿ ಹೊಂದಲಾಗಿದೆ ಎಂದು ತಿಳಿಸಿದರು.

ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್ ಮಾತನಾಡಿದರು. ಕಾರ್ಯಾಗಾರದಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು, ಸಹ ಕಾರ್ಯದರ್ಶಿಗಳು ಮತ್ತು ಸ್ಕೌಟ್ಸ್-ಗೈಡ್ಸ್ ಶಿಕ್ಷಕರು ಭಾಗವಹಿಸಿದ್ದರು. ಡಾ॥ ರಹಮತ್ ಉಲ್ಲಾ ಸ್ವಾಗತಿಸಿದರು, ಶ್ರೀ ಸಿ.ಎನ್. ಮಹೇಶ್ ವಂದಿಸಿದರು. ಶ್ರೀ ರವಿ ನಿರೂಪಿಸಿದರು.



"ವಿಶ್ವ ಯೋಗ ದಿನಾಚರಣೆ" ಪ್ರಯುಕ್ತ ಹೊಳಲ್ಕೆರೆ ಸ್ಥಳೀಯ ಸಂಸ್ಥೆ ಸ್ಕೌಟ್ಸ್ ಗೈಡ್ಸ್‌ಗಳಿಂದ ಸೈಕಲ್ ಜಾಥ ಮೂಲಕ ಜಾಗೃತಿ ಮೂಡಿಸಲಾಯಿತು.

## ದಕ್ಷಿಣ ಕನ್ನಡ



ಮೇ 9 ರಿಂದ 15ರ ವರೆಗೆ ಸ.ಉ.ಹಿ.ಪ್ರಾ. ಶಾಲೆ, ಹೂಹಾಕುವ ಕಲ್ಲು ಶಾಲೆಯ ಸಭಾಂಗಣದಲ್ಲಿ ನಡೆಯಿತು. ಈ ಕಾರ್ಯಕ್ರಮದಲ್ಲಿ 80 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ನವೀನ್ ಚಂದ್ರ ಹಾಗೂ ಗೌರವ ಸಲಹೆಗಾರರಾದ ಶ್ರೀ ರಮೇಶ್ ಶೇಣವ ಮತ್ತು ಶ್ರೀ ಅಬೂಬಕ್ಕರ್ ತೋಟಾಲ್ ರವರು ಜೊತೆಗೆ ಎಸ್.ಡಿ.ಎಂ.ಸಿ. ಸದಸ್ಯರು ಉಪಸ್ಥಿತರಿದ್ದರು. ಜೊತೆಗೆ ಸಂಸ್ಥೆಯ ಕಾರ್ಯದರ್ಶಿ, ಸಹ ಕಾರ್ಯದರ್ಶಿ ಹಾಗೂ ಕೋಶಾಧಿಕಾರಿ, ಮುಖ್ಯ ಶಿಕ್ಷಕರು ಭಾಗವಹಿಸಿದ್ದರು. ಶ್ರೀ ರಮೇಶ್ ಶೇಣವರವರು ದೀಪ ಬೆಳಗಿಸುವುದರೊಂದಿಗೆ ಶಿಬಿರವನ್ನು ಉದ್ಘಾಟಿಸಿದರು.

* ಮೇ 31ರಂದು ಮುಕ್ವೆ, ನರ್ಸರಿ, ಸ್ಥಳೀಯ ಸಂಸ್ಥೆ ಪುತ್ತೂರು ಮತ್ತು ಸಾಮಾಜಿಕ ಅರಣ್ಯ ವಲಯ, ಪುತ್ತೂರು ಇವರ ಸಹಭಾಗಿತ್ವದಲ್ಲಿ ಬೀಜದುಂಡೆ ಕಾರ್ಯಕ್ರಮ ನಡೆಯಿತು. ಈ ಕಾರ್ಯಕ್ರಮದಲ್ಲಿ ಪುತ್ತೂರು ಘಟಕದ ಅರಣ್ಯ ಅಧಿಕಾರಿ ಶ್ರೀಮತಿ ವಿದ್ಯಾರಾಣಿ, ಜಿಲ್ಲಾ ಸಂಘಟಕ ಶ್ರೀ ಕೆ. ಭರತ್ ರಾಜ್ ಸ್ಥಳೀಯ ಸಂಸ್ಥೆ ಜಂಟಿ ಕಾರ್ಯದರ್ಶಿ ಶ್ರೀಮತಿ ಸುನೀತ, ಸ.ಉ.ಹಿ.ಪ್ರಾ. ಶಾಲೆಯ ಮುಖ್ಯ ಗುರುಗಳು ಶ್ರೀ ಚರಣ್ ಕುಮಾರ್, ಗೈಡ್ ಶಿಕ್ಷಕಿಯರಾದ ಶ್ರೀಮತಿ ವೇದಾವತಿ, ಮೇಬಲ್ ಡಿಸೋಜ, ರಾಮಕೃಷ್ಣ ಪ್ರೌಢಶಾಲೆ ಪುತ್ತೂರು ಮತ್ತು ಸ.ಉ.ಹಿ.ಶಾಲೆ ಮುಕ್ವೆಯ ಒಟ್ಟು 50 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಒಟ್ಟು 2000 ದಷ್ಟು ಬೀಜದುಂಡೆಗಳನ್ನು ತಯಾರಿಸಲಾಯಿತು.

* ಮೇ 31 ರಂದು ಅನಂತಾಡಿ ನರ್ಸರಿ ಬಂಟ್ವಾಳದಲ್ಲಿ ಸ್ಥಳೀಯ ಸಂಸ್ಥೆ ಮಾಣಿ ಹಾಗೂ ಸಾಮಾಜಿಕ ಅರಣ್ಯ ವಲಯ ಬಂಟ್ವಾಳ ಇದರ ಸಹಭಾಗಿತ್ವದಲ್ಲಿ ಬೀಜದುಂಡೆ ಕಾರ್ಯಕ್ರಮ ನಡೆಯಿತು. ಕಾರ್ಯಕ್ರಮದಲ್ಲಿ ಬಂಟ್ವಾಳ ತಾಲೂಕಿನ ಅರಣ್ಯಾಧಿಕಾರಿ, ಕಾರ್ಯದರ್ಶಿ ಮತ್ತು ಪದಾಧಿಕಾರಿಗಳು ಹಾಗೂ ಬಾಲವಿಕಾಸ ಆಂಗ್ಲ ಮಾಧ್ಯಮ ಶಾಲೆ ಮಾಣಿ, ಸ.ಹಿ.ಪ್ರಾ. ಶಾಲೆ ಬಾಯಾರ್, ಸ.ಹಿ.ಪ್ರಾ ಶಾಲೆ, ಶಕ್ತಿಕಲ್ಲು,



ಸ.ಹಿ.ಪ್ರಾ ಶಾಲೆ ಅನಂತಾಡಿ, ಸ.ಹಿ.ಪ್ರಾ ಶಾಲೆ ಗಡಿಯಾರ ಕೆದಿಲ ಮತ್ತು ಸ.ಹಿ.ಪ್ರಾ.ಶಾಲೆ ಪಾವರಕೋಡಿಯಿಂದ ಒಟ್ಟು 60 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಒಟ್ಟು 1500ಕ್ಕಿಂತ ಹೆಚ್ಚು ಬೀಜದುಂಡೆಗಳನ್ನು ತಯಾರಿಸಲಾಯಿತು.

* ಜೂನ್ 1 ರಂದು ಸುಳ್ಯದ ಮೇದಿನಡ್ಕ ಸಸ್ಯಕ್ಷೇತ್ರದಲ್ಲಿ ಸ್ಥಳೀಯ ಸಂಸ್ಥೆ ಸುಳ್ಯ ಹಾಗೂ ಅರಣ್ಯ ಇಲಾಖೆಯ ಸಹಭಾಗಿತ್ವದಲ್ಲಿ ಬೀಜದುಂಡೆ ತಯಾರಿ ಕಾರ್ಯಕ್ರಮವು ನಡೆಯಿತು.

ಕಾರ್ಯಕ್ರಮದಲ್ಲಿ ರೋಟರಿ ಆಂಗ್ಲಮಾಧ್ಯಮ ಪ್ರೌಢಶಾಲೆಯ 38 ಸ್ಕೌಟ್ಸ್-ಗೈಡ್ಸ್‌ಗಳು ಸವೇರಪುರ ಶಾಲೆಯ 10 ಸ್ಕೌಟ್ಸ್ ಶಾರದಾ ಪ್ರೌಢಶಾಲೆಯ 12 ಗೈಡ್ಸ್, ಸ.ಹಿ.ಪ್ರಾ.ಶಾಲೆ ನಾಗಪಟ್ಟಣದಿಂದ 5 ಗೈಡ್ಸ್ ಭಾಗವಹಿಸಿದ್ದರು.

ಸುಳ್ಯ ಅರಣ್ಯ ಘಟಕದ ಅಧಿಕಾರಿ ಶ್ರೀಮತಿ ಪ್ರೀತಿ ನಾಯ್ಕ ಅವರು ಬೀಜದುಂಡೆ ತಯಾರಿ ಪ್ರಾತ್ಯಕ್ಷಿಕೆ ನಡೆಸಿಕೊಟ್ಟರು. ಮತ್ತೋರ್ವ ಅಧಿಕಾರಿ ಶ್ರೀ ವಸಂತ್ ಹಾಗೂ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ರೋಟೆರಿಯನ್ ಎಸ್.ಎಮ್. ಬಾಪೂ ಸಾಹೇಬ್, ಉಪಾಧ್ಯಕ್ಷರಾದ ಶ್ರೀ ಹರಿ ಪೈಂದೋಡಿ, ಶ್ರೀ ಸಿ.ಎ. ಕೇಶವ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ಕೆ. ರಾಮಕೃಷ್ಣ ಹಾಗೂ ಹಾಜಿ ಅಬೂಬಕ್ಕರ್ ಕಟ್ಟೆಕ್ಕಾರ್ಸ್ ಮಕ್ಕಳ ಜೊತೆ ಬೆರೆತು ಬೀಜದುಂಡೆಗಳನ್ನು ತಯಾರಿಸಿ ಶುಭ ಹಾರೈಸಿದರು.

* ಸ್ಥಳೀಯ ಸಂಸ್ಥೆ ಬೆಳ್ತಂಗಡಿ ಹಾಗೂ ಸಾಮಾಜಿಕ ಅರಣ್ಯ ವಲಯ ಬೆಳ್ತಂಗಡಿ ಇವರ ಸಹಭಾಗಿತ್ವದಲ್ಲಿ ಬೀಜದುಂಡೆ ಕಾರ್ಯಕ್ರಮ ಮತ್ತು ವನಮಹೋತ್ಸವವು ಬಹಳ ಯಶಸ್ವಿಯಾಗಿ ನಡೆಯಿತು. ಈ ಕಾರ್ಯಕ್ರಮವು ಬೆಳ್ತಂಗಡಿ ವಲಯ ಅರಣ್ಯ ಅಧಿಕಾರಿ ಶ್ರೀ ಗಣೇಶ್ ತಂತ್ರಿ ಹಾಗೂ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀಮತಿ ಪ್ರಮೀಳಾರವರ ನೇತೃತ್ವದಲ್ಲಿ ನಡೆಯಿತು. ಈ ಕಾರ್ಯಕ್ರಮದಲ್ಲಿ ಸಸ್ಯಪಾಲನ ಕ್ಷೇತ್ರ ಮಂಜೊಟ್ಟಿ ಇಲ್ಲಿಯ ನರ್ಸರಿಯ ಸಿಬ್ಬಂದಿ ವರ್ಗ ಹಾಗೂ ಬೆಳ್ತಂಗಡಿಯ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು. ವಿವಿಧ ರೀತಿಯ ಬೀಜದುಂಡೆಗಳನ್ನು ತಯಾರಿಸಿದರು.

* ಜೂನ್ 1 ರಂದು ಉಪ್ಪಿನಂಗಡಿ ಸ್ಥಳೀಯ ಸಂಸ್ಥೆಯ ವತಿಯಿಂದ ಸರಕಾರಿ ಮಾದರಿ ಉನ್ನತ ಹಿರಿಯ ಪ್ರಾಥಮಿಕ ಶಾಲೆ ಉಪ್ಪಿನಂಗಡಿಯಲ್ಲಿ "ನೆಲ-ಜಲ ಸಂರಕ್ಷಣಾ ಅಭಿಯಾನ" ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. "ನದಿಗಳ ಪಾವಿತ್ರ್ಯ ಉಳಿಸೋದು ನಾಗರಿಕ ಸಮಾಜದ ಆದ್ಯ ಕರ್ತವ್ಯ" ಆಗಿದೆ. ನದಿಗಳನ್ನು ತ್ಯಾಜ್ಯ ಮುಕ್ತಗೊಳಿಸಿ ಪ್ರಾಕೃತಿಕ ಸಂಪತ್ತಾಗಿರುವ ನದಿಗಳಲ್ಲಿ ಶುದ್ಧ ನೀರು ಹರಿಯುವಂತೆ ಮಾಡಿ ಮನುಷ್ಯನ ಸಹಿತ ಸಕಲ ಜೀವರಾಶಿಗಳಿಗೆ ಜಲಮೂಲವಾಗಿರುವ ನದಿಗಳ ಪಾವಿತ್ರ್ಯತೆ ಉಳಿಸುವುದು ನಾಗರಿಕ ಸಮಾಜದ ಆದ್ಯ ಕರ್ತವ್ಯವಾಗಿದೆ ಎಂದು ಸಂದೇಶ ಸಾರುವ ಮೂಲಕ ಅಭಿಯಾನವನ್ನು ನಡೆಸಲಾಯಿತು. ನಂತರ ಉಪ್ಪಿನಂಗಡಿ ಸ್ಥಳೀಯ ಸಂಸ್ಥೆಗೆ ಒಳಪಡುವ ಸುಮಾರು 153 ಗೈಡ್‌ಗಳು 44 ಸ್ಕೌಟ್‌ಗಳು ಜೊತೆಗೂಡಿ ನೇತ್ರಾವತಿ ನದಿ ಕಿನಾರೆಯನ್ನು ಸ್ವಚ್ಛಗೊಳಿಸುವ ಕಾರ್ಯಕ್ರಮವನ್ನು ಯಶಸ್ವಿಗೊಳಿಸುವಲ್ಲಿ ಸಹಕರಿಸಿದರು.



ಸ್ಥಳೀಯ ಸಂಸ್ಥೆಯ ಉಪ್ಪಿನಂಗಡಿ ಅಧ್ಯಕ್ಷರಾದ ಶ್ರೀ ಅಬ್ರಾಹಂ ವರ್ಗೀಸ್, ನೆಲಜಲ ಸಂರಕ್ಷಣಾ ಸಮಿತಿ ಅಧ್ಯಕ್ಷ ಡಾ. ಕೈಲಾರ್ ರಾಜ್ ಗೋಪಾಲ್ ಭಟ್, ಉಪ್ಪಿನಂಗಡಿ ಗ್ರಾಮ ಪಂಚಾಯತ್ ಕಾರ್ಯದರ್ಶಿ ಶ್ರೀಮತಿ ಮರಿಯಮ್ಮ ಚಾಲನೆಗೊಳಿಸಿ, ಜಾಥಾ ಉಪ್ಪಿನಂಗಡಿ ಪ್ರಮುಖ ಬೀದಿಗಳಲ್ಲಿ ಸಂಚರಿಸಿತು. ಬಳಿಕ ಉಪ್ಪಿನಂಗಡಿ ನೇತ್ರಾವತಿ ಕುಮಾರಧಾರ ನದಿಯ ಒಡಲನ್ನು ಸ್ವಚ್ಛಗೊಳಿಸಲಾಯಿತು. ಈ ಅಭಿಯಾನಕ್ಕೆ ಶ್ರೀ ಸಹಸ್ರಲಿಂಗೇಶ್ವರ ದೇವಾಯ, ಉಪ್ಪಿನಂಗಡಿ ಜೆಸಿಐ

ಘಟಕ, 34ನೇ ನೆಕ್ಕಿಲಾಡಿ ಜೆಸಿಐ ಘಟಕ, ರೋಟರಿ ಕ್ಲಬ್, ಗ್ರಾಮ ಪಂಚಾಯತ್, ವನಿತಾ, ಸಮಾಜ, ಸ್ಥಳೀಯ ವಿದ್ಯಾಸಂಸ್ಥೆಗಳು ಸಹಯೋಗ ನೀಡಿ ಸಹಕರಿಸಿದರು. ಗಿಡನೆಟ್ಟು ವನಮಹೋತ್ಸವವನ್ನು ಆಚರಿಸಿದರು. ಕಾರ್ಯಕ್ರಮ ನಿರೂಪಣೆಯನ್ನು ಗೈಡ್ ಕು॥ ಅನನ್ಯ ನೆರವೇರಿಸಿದರು. ಗೈಡ್ ಕು॥ ಶ್ರೀಶಾ ಧನ್ಯವಾದವಿತ್ತರು.

* ಜೂನ್ 7 ರಂದು ಕಡಲಕೆರೆ ನರ್ಸರಿ, ಸ್ಥಳೀಯ ಸಂಸ್ಥೆ ಮೂಡಬಿದ್ರೆ ಮತ್ತು ಸಾಮಾಜಿಕ ಅರಣ್ಯ ವಲಯ ಮೂಡಬಿದ್ರೆ ಇದರ ಸಹಭಾಗಿತ್ವದಲ್ಲಿ ಬೀಜದುಂಡೆ ಮತ್ತು ವಿಶ್ವ ಪರಿಸರ ದಿನಾಚರಣೆ ಕಾರ್ಯಕ್ರಮ ಯಶಸ್ವಿಯಾಗಿ ನಡೆಯಿತು. ಕಾರ್ಯಕ್ರಮದಲ್ಲಿ ಮೂಡಬಿದ್ರೆ ಘಟಕದ ಅರಣ್ಯ ಅಧಿಕಾರಿ ಶ್ರೀ ಚಿದಾನಂದರವರು, ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ವಿನ್ಸೆಂಟ್ ಡಿ'ಕೋಸ್ತರವರು. ಜಿಲ್ಲಾ ಸಂಘಟಕರಾದ ಶ್ರೀ ಕೆ. ಭರತ್ ರಾಜ್ ಅರಣ್ಯ ಉಪವಲಯ ಅಧಿಕಾರಿ ಕುಮಾರಿ ರೋಹಿಣಿ ಮತ್ತು ಶ್ರೀ ಮಂಜುನಾಥ್, ಮೂಡಬಿದ್ರೆ ಸ್ಥಳೀಯ ಸಂಸ್ಥೆಯ ಜಂಟಿ ಕಾರ್ಯದರ್ಶಿ ಶ್ರೀ ನವೀನ್ ರವರು. ಅರಣ್ಯ ಇಲಾಖೆಯ ಸಿಬ್ಬಂದಿ ವರ್ಗದವರು ಹಾಗೂ ರೋಟರಿ ಆಂಗ್ಲ ಮಾಧ್ಯಮ ಶಾಲೆ ಮೂಡಬಿದ್ರೆ, ಡಿ.ಜೆ. ಕನ್ನಡ ಮಾಧ್ಯಮ ಶಾಲೆ, ಸೈಂಟ್ ಥೋಮಸ್ ಆಂಗ್ಲ ಮಾಧ್ಯಮ ಶಾಲೆ, ಜೈನ್ ಪ್ರೌಢಶಾಲೆ ಮೂಡಬಿದ್ರೆಯಿಂದ ಒಟ್ಟು 115



ಸ್ಕೌಟ್-ಗೈಡ್‌ಗಳು ಹಾಗೂ ಶಿಕ್ಷಕರು ಭಾಗವಹಿಸಿದರು. ಒಟ್ಟು 2500 ಬೀಜದುಂಡೆ ಗಳನ್ನು ತಯಾರಿಸಲಾಯಿತು.

* ಜೂನ್ 5ರಂದು ವಿಶ್ವ ಪರಿಸರ ದಿನಾಚರಣೆಯ ಅಂಗವಾಗಿ ದ.ಕ. ಜಿಲ್ಲಾ ಸಂಸ್ಥೆಯ ಆಡಳಿತ ಕಛೇರಿಯ ಆವರಣ ಲಾಲ್‌ಭಾಗ್, ಮಂಗಳೂರಿನಲ್ಲಿ ಡಾ. ಎನ್.ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರ ಮೂಲಕ ಗಿಡಗಳನ್ನು ನೆಡುವ ಮೂಲಕ ಆಚರಿಸಲಾಯಿತು. ಜಿಲ್ಲಾ ಸಂಸ್ಥೆಯ



ಪದಾಧಿಕಾರಿಗಳು, ಕಛೇರಿ ಸಿಬ್ಬಂದಿಗಳು, ಸ್ಕೌಟ್ಸ್-ಗೈಡ್ಸ್, ಸ್ಥಳೀಯರು ಭಾಗವಹಿಸಿದರು.

* ಜೂನ್ 5ರಂದು ವಿಶ್ವ ದಿನಾಚರಣೆಯ ಪ್ರಯುಕ್ತ ಬಂಟ್ವಾಳ ಮೊಡಂಕಾಪಿನ ಕಾರ್ಮೆಲ್ ಬಾಲಿಕೆಯರ ಪ್ರೌಢಶಾಲೆಯಲ್ಲಿ ಸುಗಂಧಿ ಗೈಡ್ಸ್ ದಳದ ವತಿಯಿಂದ ಗಿಡನೆಡುವ ಕಾರ್ಯಕ್ರಮವನ್ನು ಆಚರಿಸಲಾಯಿತು. ಸುಗಂಧಿ ಗೈಡ್ಸ್ ದಳದ ಸದಸ್ಯರು ನೆಲ್ಲಿ, ಕಹಿಬೇವು, ಮಾಗೋಣಿ ಮುಂತಾದ ಗಿಡಗಳನ್ನು ನೆಡಲಾಯಿತು. ಗೈಡರ್ ಶ್ರೀಮತಿ ಉಮಾದೇವಿ ಎನ್. ಮತ್ತು ಗೈಡರ್ ಶ್ರೀಮತಿ ಮರಿಯಾ ಶರ್ಮಿಳಾ ಇವರು ಉಪಸ್ಥಿತರಿದ್ದರು. ಮುಖ್ಯೋಪಾಧ್ಯಾಯರು ಭಗಿನಿ ನವೀನ ಎ.ಸಿ. ಈ ಕಾರ್ಯಕ್ರಮಕ್ಕೆ ಶುಭ ಕೋರಿದರು.

* ಜೂನ್ 12ರಂದು ವಿಶ್ವ ಪರಿಸರ ದಿನಾಚರಣೆಯ ಅಂಗವಾಗಿ ಸಂಸ್ಥೆಯ ಪಿಲಿಕುಳದ ತರಬೇತಿ ಕೇಂದ್ರದಲ್ಲಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಮುಖ್ಯ ಅತಿಥಿಯಾಗಿ ಮಂಗಳೂರು ವಲಯುದ ವಲಯ ಅರಣ್ಯಾಧಿಕಾರಿ ಶ್ರೀ ಶ್ರೀಧರ್ ಅವರು ಭಾಗವಹಿಸಿದ್ದರು. ಶ್ರೀಧರ್ ಅವರು ಗಿಡ ನೆಡುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ನಂತರ ನಡೆದ ಕಾರ್ಯಕ್ರಮದಲ್ಲಿ ಅವರು ಪರಿಸರದ ಮಹತ್ವದ ಬಗ್ಗೆ ಮಾತನಾಡಿದರು. ಪ್ರಕೃತಿಯನ್ನು ಪ್ರೀತಿಸುವ ಸಂಸ್ಕೃತಿಯನ್ನು ಬೆಳೆಸಿಕೊಳ್ಳಿ ಎಂದು ಹೇಳಿದರು. ನಾವು ಮಾಡುವ ಪ್ರತಿಯೊಂದು ಕೆಲಸಕ್ಕೂ ಒಂದು ಉದ್ದೇಶ ಇರುತ್ತದೆ. ರಕ್ಷಣೆಗಾಗಿ ಪರಿಸರ ದಿನಾಚರಣೆ ಮಾಡುತ್ತಿದ್ದೇವೆ. ಎಂದು ಪರಿಸರ ದಿನಾಚರಣೆಯ ಮಹತ್ವವನ್ನು ವಿವರಿಸಿದರು. ಇನ್ನೊಬ್ಬ ಅತಿಥಿ ಶುಭೋದಯ ವಿದ್ಯಾ ಸಂಸ್ಥೆಯ ಪ್ರಾಂಶುಪಾಲೆ ಶ್ರೀಮತಿ ಜಯಶ್ರೀ ಪೈ ಅವರು ಮಾತನಾಡಿ ಮಕ್ಕಳು ಪರೀಕ್ಷೆಯಲ್ಲಿ ಬರೇ ಅಂಕಗಳನ್ನು ಪಡೆಯುವುದಲ್ಲದೇ



ಪರಿಸರವನ್ನು ವೀಕ್ಷಿಸುವ, ಪ್ರೀತಿಸುವ ಹಾಗೂ ರಕ್ಷಿಸುವ ಗುಣ ಬೆಳೆಸಿಕೊಳ್ಳಬೇಕು ಎಂದರು. ಇದೇ ಸಂದರ್ಭದಲ್ಲಿ ಪರಿಸರ ಶ್ರೀ ಕೃಷ್ಣಪ್ಪ ಅವರು ಮಕ್ಕಳಿಗೆ ಪರಿಸರದ ಘೋಷಣೆಗಳನ್ನು ಹೇಳಿಕೊಟ್ಟರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತ ಡಾ. ಎನ್.ಜಿ. ಮೋಹನ್ ಅವರು ವಹಿಸಿದ್ದರು. ವೇದಿಕೆಯಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ರಾಮಶೇಷಶೆಟ್ಟಿ, ಜಿಲ್ಲಾ ಕೋಶಾಧಿಕಾರಿ ಶ್ರೀ ವಾಸುದೇವ ಬೋಳೂರು, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಜಿ. ಕಜೆ, ಜಿಲ್ಲಾ ಸಂಸ್ಥೆಯ ಮ್ಯಾನೇಜರ್ ಶ್ರೀ ಭಾಸ್ಕರ್, ಜಿಲ್ಲಾ ಸಂಘಟನಾ ಆಯುಕ್ತೆ (ಗೈಡ್ಸ್) ಶ್ರೀಮತಿ ಶುಭ ವಿಶ್ವನಾಥ್ ಹಾಗೂ ಜಿಲ್ಲಾ ಸಂಘಟಕ ಶ್ರೀ ಭರತ್ ರಾಜ್ ಉಪಸ್ಥಿತರಿದ್ದರು. ವಾಮಂಜೂರಿನ ವಿದ್ಯಾಜ್ಯೋತಿ ಆಂಗ್ಲ ಮಾಧ್ಯಮ ಶಾಲೆಯ ಹಾಗೂ ಮುಡುಶೆಡ್ಡೆಯ ಶುಭೋದಯ ವಿದ್ಯಾಸಂಸ್ಥೆ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಕಾರ್ಯಕ್ರಮದಲ್ಲಿ ಹಾಜರಿದ್ದರು. ಶುಭೋದಯ ವಿದ್ಯಾಸಂಸ್ಥೆಯ ಶಿಕ್ಷಕಿ ಶ್ರೀಮತಿ ಪೂರ್ಣಿಮ ಅವರು ಎಲ್ಲರನ್ನೂ ಸ್ವಾಗತಿಸಿದರು. ಶ್ರೀ ಎಂ.ಜಿ. ಕಜೆ ಅವರು ಧನ್ಯವಾದವಿತ್ತರು.

* ಜೂನ್ 6 ರಂದು ರೋಟರಿ ಆಂಗ್ಲ ಮಾಧ್ಯಮ ಶಾಲೆ, ಮುಡಬಿದ್ರೆಯ ಸ್ಕೌಟ್ಸ್-ಗೈಡ್ಸ್‌ಗಳು ಮತ್ತು ರೋಟರಿ ಕ್ಲಬ್ ಮೂಡಬಿದಿರೆ ಟೆಂಪಲ್ ಟೌನ್ ವತಿಯಿಂದ ಮೂಡಬಿದ್ರೆ ಪಟ್ಟಣದಲ್ಲಿ ಪರಿಸರ ಜಾಗೃತಿ ಮೂಡಿಸುವ ಸೈಕಲ್ ಜಾಥ ಕಾರ್ಯಕ್ರಮ ನಡೆಯಿತು. ಕಾರ್ಯಕ್ರಮದಲ್ಲಿ 100 ಅಧಿಕ ಸ್ಕೌಟ್ಸ್-ಗೈಡ್ಸ್ ಹಾಗು ಸಂಸ್ಥೆಯ ಇತರ ವಿದ್ಯಾರ್ಥಿಗಳು ಹಾಗೂ ಪದಾಧಿಕಾರಿಗಳು ಭಾಗವಹಿಸಿದರು.

* ಜೂನ್ 8 ರಂದು ಲೇಡಿಹಿಲ್ ವಿಕ್ಟೋರಿಯಾ ಬಾಲಕಿಯರ ಪ್ರೌಢಶಾಲೆ, ಲೇಡಿಹಿಲ್, ಮಂಗಳೂರಿನ ಗೈಡ್ಸ್‌ಗಳು ಮತ್ತು ಸಂಸ್ಥೆಯ ಇತರ ವಿದ್ಯಾರ್ಥಿಗಳು ಸೇರಿ ಲೇಡಿಹಿಲ್‌ನಿಂದ ಪ್ರಾರಂಭವಾಗಿ ಮಂಗಳೂರಿನ ಮಹಾನಗರ ಪಾಲಿಕೆ ಮಾರ್ಗವಾಗಿ ಬೃಹತ್ ಪರಿಸರ ಸಂರಕ್ಷಣಾ ಜಾಗೃತಿ ಜಾಥ ನಡೆಸಲಾಯಿತು. ಕಾರ್ಯಕ್ರಮದಲ್ಲಿ ಸಂಸ್ಥೆಯ 300ಕ್ಕಿಂತ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಶಿಕ್ಷಕರು ಭಾಗವಹಿಸಿದ್ದರು.

* ಜೂನ್ 8 ರಂದು ಸೈಂಟ್ ಮೇರಿಸ್ ವಿದ್ಯಾಸಂಸ್ಥೆಯ ಭವ್ಯ ಸಭಾಂಗಣದಲ್ಲಿ 35 ಸ್ಕೌಟ್-ಗೈಡ್‌ಗಳು ಸಮವಸ್ತ್ರ ಧರಿಸಿ ಬಹಳ ಶಿಸ್ತಿನಿಂದ ಸ್ಕೌಟರ್ ಶ್ರೀ ಸತೀಶ್, ಶ್ರೀ ಪುರುಷೋತ್ತಮ, ಗೈಡರ್ ಕು. ಅಕ್ಷಯ ರಾವ್, ಶ್ರೀಮತಿ ಶ್ವೇತಾ, ಶ್ರೀಮತಿ ನಮಿತಾ ಹಾಗೂ ಶ್ರೀ ಶಶಿಧರ್‌ರವರ ಮೇಲುಸ್ತವಾರಿಯಲ್ಲಿ ಧ್ವಜಾರೋಹಣವನ್ನು ನಡೆಸಿಕೊಟ್ಟರು. ಸಭೆಯ ಅಧ್ಯಕ್ಷ ಸ್ಥಾನವನ್ನು ಸಂಸ್ಥೆಯ ಸಂಚಾಲಕರಾದ ವಂ. ಆಬೆಲ್ ಲೋಬೋರವರು ವಹಿಸಿದ್ದು, ಮಕ್ಕಳನ್ನು ಕುರಿತು



ಮಾತನಾಡುತ್ತಾ ಇಂತಹ ಚಟುವಟಿಕೆಗಳು ವಿದ್ಯಾರ್ಥಿಗಳಲ್ಲಿ ಸೇವಾ ಮನೋಭಾವನೆ ಮೂಡಿಸುತ್ತದೆ. ಮುಖ್ಯ ಅತಿಥಿಗಳಾಗಿ ಸಮೂಹ ಸಂಪನ್ಮೂಲ ಅಧಿಕಾರಿಗಳಾದ ಶ್ರೀ ಅಶ್ರಫ್‌ರವರು ಸಹಕರಿಸಿ ಈ ರ‍್ಯಾಲಿಯ ಉದ್ಘಾಟನಾ ಪ್ರಕ್ರಿಯೆ ನೆರವೇರಿಸಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಶುಭ ಕೋರಿ ವಿದ್ಯುಕ್ತವಾಗಿ ಚಾಲನೆ ನೀಡಿದರು.

ಪರಿಸರ ಸಂರಕ್ಷಣೆಯ ಬಗ್ಗೆ ಘೋಷವಾಕ್ಯ ಕೂಗುತ್ತ ಮೆರವಣಿಗೆ ಉದ್ದಕ್ಕೂ ಜನರಿಗೆ ಪರಿಸರದ ಬಗ್ಗೆ ಜಾಗೃತಿ ಮೂಡಿಸುತ್ತಾ ಸೈಕಲ್ ಸವಾರಿ ನಡೆಸಿದ ಸ್ಕೌಟ್ಸ್-ಗೈಡ್ಸ್‌ಗಳು ಸ.ಹಿ.ಪ್ರಾ.ಶಾಲೆ ಹೀರೇಬಂಡಾಡಿ ತಲುಪಿ ಅಲ್ಲಿ ಪರಿಸರ ಸ್ವಚ್ಛತೆಯ ನಂತರ ಸಾಂಸ್ಕೃತಿಕ ಕಾರ್ಯಕ್ರಮ ನೀಡಿದರು. ರ‍್ಯಾಲಿಯ ದ್ಯೋತಕವಾಗಿ ಗಿಡ ನೆಡಲಾಯಿತು.

## ಧಾರವಾಡ

"ಹೆಚ್ಚುತ್ತಿರುವ ಮಾಲಿನ್ಯದಿಂದ ಮುಕ್ತರಾಗಬೇಕಾದರೆ ಪ್ರತಿಯೊಬ್ಬರು ಗಿಡ ಮರಗಳನ್ನು ಬೆಳೆಸುವುದರ ಜೊತೆಗೆ ಸಂರಕ್ಷಣೆ ಮಾಡುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ" ಎಂದು ಶಿಕ್ಷಣ ಇಲಾಖೆಯ ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎಸ್.ಬಿ. ಬಸಾಪೂರ ತಿಳಿಸಿದರು. ಇಲ್ಲಿನ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಆವರಣದಲ್ಲಿ ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಏರ್ಪಡಿಸಿದ ಸಸಿ ನೆಡುವ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಅವರು ಮಾತನಾಡುತ್ತಿದ್ದರು. ಮಕ್ಕಳು ಕೇವಲ ಶಾಲಾ ಆವರಣದಲ್ಲಿ ನೆಟ್ಟ ಸಸಿಗಳನ್ನು ಜೋಪಾನ ಮಾಡುವ ಮನೋಭಾವನೆ ಬೆಳೆಸಿಕೊಳ್ಳಬೇಕೆಂದರು.

ನಿವೃತ್ತ ಜಿಲ್ಲಾ ವಾರ್ತಾಧಿಕಾರಿ ಶ್ರೀ ಪಿ.ಎಸ್. ಹಿರೇಮಠ ಅತಿಥಿಗಳಾಗಿ ಮಾತನಾಡಿ ಪರಿಸರ ಸಂರಕ್ಷಣೆ ಕೆಲವೇ ಜನರಿಗೆ ಸೀಮಿತವಲ್ಲ, ಪ್ರತಿಯೊಬ್ಬರು ರಕ್ಷಣೆ ಮಾಡಬೇಕಾಗಿದೆ ಎಂದರು.

ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ ಅಧ್ಯಕ್ಷತೆ ವಹಿಸಿ ಮಾತನಾಡಿ ಪರಿಸರವನ್ನು ನಾವು ಉಳಿಸಿದರೆ ಪರಿಸರ ನಮ್ಮನ್ನು ಉಳಿಸುತ್ತದೆ. ಪರಿಸರದಿಂದ ಅಂತರ್ಜಲ ಮಳೆ ಹೆಚ್ಚಾಗುತ್ತದೆ. ವಿದ್ಯಾರ್ಥಿಗಳು ತಮ್ಮ ತಮ್ಮ ಮನೆಗಳಲ್ಲಿ ಪರಿಸರದ ಮಹತ್ವ ಮೂಡಿಸಿದಾಗ ಮಾತ್ರ ಉತ್ತಮ ಪರಿಸರ ಉಳಿಸಲು ಸಾಧ್ಯವೆಂದು ಅಭಿಪ್ರಾಯ ಪಟ್ಟರು.

ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ವಿ.ವಿ. ಕಟ್ಟಿ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀಮತಿ ಪ್ರಭಾ ಎಂ. ಲೋಂಡೆ ಉಪಸ್ಥಿತರಿದ್ದರು. ಈ ಸಂದರ್ಭದಲ್ಲಿ ಎ.ಎಸ್.ಓ.ಸಿ., ಶ್ರೀ ಎಸ್.ಎನ್. ಪೂಜಾರ, 22 ಸ್ಕೌಟರ್ಸ್-ಗೈಡರ್ಸ್ ಹಾಗೂ 120 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿ ಸಸಿಗಳನ್ನು ನೆಟ್ಟರು.



## ಗದಗ

ಜೂನ್ 4ರಂದು ವಿಶ್ವ ಪರಿಸರ ದಿನಾಚರಣೆಯನ್ನು ಗದಗಿನ ಕೆ.ಎಲ್.ಇ. ಶಾಲೆಯಲ್ಲಿ ಆಚರಿಸಲಾಯಿತು. ಶ್ರೀ ಮಂಜುನಾಥ ಮುಳುಗುಂದ ಅಧ್ಯಕ್ಷತೆ ವಹಿಸಿದ್ದರು. ಅತಿಥಿಗಳಾಗಿ ಶ್ರೀ ಜಿ.ಹೆಚ್. ಪುಜಾರ, ಜಿಲ್ಲಾ ಕಾರ್ಯದರ್ಶಿ ಮಾತನಾಡುತ್ತಾ ಪರಿಸರ ಸ್ವಚ್ಛತೆ, ಗಿಡಗಳ ಹಿನ್ನೆಲೆ, ಸಸಿ ನೆಡುವ ಹಿನ್ನೆಲೆ ಎಲ್ಲವನ್ನು ವಿಸ್ತಾರವಾಗಿ ತಿಳಿಸಿದರು. ಶ್ರೀಮತಿ ಕಲ್ಪನಾ ಕೆ.ಎಲ್.ಇ. ಶಾಲೆಯ ಪ್ರಾಂಶುಪಾಲರು ಶ್ರೀ ಪುಟ್ಟರಾಜ, ಶ್ರೀಮತಿ ಗೌಡರ, ಶ್ರೀಮತಿ ಶಿವಲೀಲಾ ಅಕ್ಕಿ, ಶ್ರೀಮತಿ ಮಾನ್ವಿ, ಹಾಗೂ ಶ್ರೀ ಎ.ಎಸ್. ಶಿವುಕುಮಾರ, ಎ.ಎಸ್.ಓ.ಸಿ. ಭಾಗವಹಿಸಿದ್ದರು.



## ಕೊಡಗು

ಜೂನ್ 21 ರಂದು ಜಿಲ್ಲಾ ಸಂಸ್ಥೆ ಕೊಡಗು, ಜಿಲ್ಲಾ ಕಾನೂನು ಸೇವಾಪ್ರಾಧಿಕಾರ, ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಗೂ ಸಂತ ಜೋಸೆಫರ ವಿದ್ಯಾ ಸಂಸ್ಥೆ ಕೊಡಗು ಇವರ ಸಂಯುಕ್ತ ಆಶ್ರಯದಲ್ಲಿ "ವಿಶ್ವ ಯೋಗ" ದಿನಾಚರಣೆ ಮತ್ತು "ವಿಶ್ವ ಪರಿಸರ" ದಿನಾಚರಣೆಯನ್ನು ಸಂತ ಜೋಸೆಫ್ ವಿದ್ಯಾ ಸಂಸ್ಥೆ ಆವರಣದಲ್ಲಿ ಏರ್ಪಡಿಸಲಾಗಿತ್ತು.

ಕೊಡಗು ಜಿಲ್ಲಾ ಸಂಸ್ಥೆಯ ಪ್ರಧಾನ ಆಯುಕ್ತರಾದ ಶ್ರೀ ಕಂವಿರಂಡ ಕಿಟ್ಟು ಕಾಳಪ್ಪನವರು ಎಲ್ಲರನ್ನೂ ಸ್ವಾಗತಿಸಿದರು. ಉದ್ಘಾಟನೆಯನ್ನು ಗಿಡಕ್ಕೆ ನೀರೆರೆಯುವುದರ ಮೂಲಕ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿ ಹಾಗೂ ಹಿರಿಯ ನ್ಯಾಯಾಧೀಶರು ಶ್ರೀ ನೂರು ನೀಸೆ ರವರು ನೆರವೇರಿಸಿದರು. ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯವರು ಆಯೋಜಿಸಿರುವ ಈ ಕಾರ್ಯಕ್ರಮವು ಬಹಳ ಮಹತ್ವ ಪೂರ್ಣವಾಗಿದ್ದು ಇದೇ ದಿನ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸುತ್ತಿರುವುದು ಇನ್ನು ಅರ್ಥಪೂರ್ಣವಾಗಿದೆ. ಏಕೆಂದರೆ



ಪ್ರಕೃತಿ ಇಲ್ಲದೆ ಮನುಷ್ಯನಿಲ್ಲ, ಮನುಷ್ಯನಿಲ್ಲದೆ ಪ್ರಕೃತಿ ಇಲ್ಲ. ಆದುದರಿಂದ ನಾವು ನಮ್ಮ ಆರೋಗ್ಯವನ್ನು ಕಾಪಾಡಲು ಯೋಗದೊಂದಿಗೆ ಪ್ರಕೃತಿ ಅವಲಂಬಿಸಿದ್ದೇವೆ. ಆದುದರಿಂದ ಇಂದು ಮಕ್ಕಳ ಸಮ್ಮುಖದಲ್ಲಿ ಇದೊಂದು ಕಾರ್ಯಕ್ರಮ ಬಹಳ ಉತ್ತಮ ಕಾರ್ಯಕ್ರಮವಾಗಿದೆ. ಮಕ್ಕಳು ತಮ್ಮ ಜೀವನದಲ್ಲಿ ಯೋಗವನ್ನು ಅಭ್ಯಸಿಸುವುದರೊಂದಿಗೆ ಪ್ರಕೃತಿಯನ್ನು ಪ್ರೀತಿಸಬೇಕು ಎಂದು ಕರೆ ನೀಡಿದರು.

ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯದ ವಾರ್ಷಿಕ ಯೋಜನೆ ಪುಸ್ತಕವನ್ನು ಬಿಡುಗಡೆ ಮಾಡುವುದರ ಮೂಲಕ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಗಾಯಿತ್ರಿಯವರು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಬಹಳ ಉತ್ತಮ ಸೇವೆ ಸಲ್ಲಿಸುತ್ತಿದ್ದು ಎಲ್ಲರ ಪ್ರಶಂಸೆಗೆ ಪಾತ್ರವಾಗಿದೆ. ಅಲ್ಲದೆ ಇಂದು ಯೋಗ ದಿನಾಚರಣೆ ಮತ್ತು ವಿಶ್ವ ಪರಿಸರ ದಿನಾಚರಣೆಯನ್ನು ಮಕ್ಕಳ ಸಮ್ಮುಖದಲ್ಲಿ ಆಯೋಜಿಸಿರುವುದು ಬಹಳ ಅರ್ಥಪೂರ್ಣವಾಗಿದೆ. ಮಕ್ಕಳು ಜೀವನದಲ್ಲಿ ಯೋಗವನ್ನು ಅಭ್ಯಸಿಸಿ ಅದನ್ನು ಜೀವನದಲ್ಲಿ ಅಳವಡಿಸಿಕೊಂಡರೆ ಜೀವನವು ಉತ್ತಮವಾಗಿ ರೂಪುಗೊಳ್ಳುತ್ತದೆ ಎಂದರು. ಅಲ್ಲದೆ ಮಕ್ಕಳು ನಮಗೆ ಇಂದು ನ್ಯೂಸ್ ಪೇಪರ್ ಆಗಿ ಕೆಲಸ ಮಾಡಬೇಕು. ಇಲ್ಲಿ ಏನೂ ಕಲಿಸುತ್ತೇವೆಯೋ ಅದನ್ನು ತಮ್ಮ ಮನೆಗಳಲ್ಲಿ ತಿಳಿಸಬೇಕು ಎಂದು ಕಿವಿಮಾತು ಹೇಳಿದರು.

ಸಾರ್ವಜನಿಕ ಶಿಕ್ಷಣ ಇಲಾಖೆಯ ದೈಹಿಕ ಅಧೀಕ್ಷಕರಾದ ಶ್ರೀ ವೆಂಕಟೇಶ್ವರ ರವರು ನೆರೆದಿದ್ದ ಎಲ್ಲರಿಗೂ ಯೋಗದ ಹಲವಾರು ಆಸನಗಳನ್ನು ಪ್ರಾಯೋಗಿಕವಾಗಿ ಹೇಳಿಕೊಟ್ಟರು.

ವೇದಿಕೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಕಂವಿರಂಡ ಕಿಟ್ಟು ಕಾಳಪ್ಪ, ಸಂತ ಜೋಸೆಫರ ಶಾಲಾ ಮುಖ್ಯೋಪಾಧ್ಯಾಯರಾದ ಸಿಸ್ಟರ್ ರೋ, ಸ್ಕೌಟ್ಸ್-ಗೈಡ್ಸ್ ಉಪಾಧ್ಯಕ್ಷರಾದ ಶ್ರೀಮತಿ ರಾಣಿಮೂಟಯ್ಯ, ಶ್ರೀ ಸುಕ್ರುದೇವಗೌಡ, ಖಜಾಂಚಿ ಶ್ರೀ ಸೋಮಯ್ಯ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಜಿಮ್ಮಿ ಸಿಕ್ವೇರಾ, ಜಿಲ್ಲಾ ಸಂಘಟಕರಾದ ಶ್ರೀಮತಿ ಯು.ಸಿ. ದಮಯಂತಿ, ಎಸ್.ಜಿ.ವಿ. ಶ್ರೀಮತಿ ರಂಜನಿ ಹಾಗೂ ಕಛೇರಿ ಸಿಬ್ಬಂದಿ ಉಪಸ್ಥಿತರಿದ್ದರು.

## ಕೊಪ್ಪಳ

ಜೂನ್ 21ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ತಾಲೂಕು ಸಂಸ್ಥೆ ಯಲಬುರ್ಗಾ, ಶ್ರೀ ಬಸವಲಿಂಗೇಶ್ವರ ಯೋಗ ಕೇಂದ್ರ ಯಲಬುರ್ಗಾ, ತಾಲೂಕ ಆಡಳಿತ, ಹಾಗೂ ಪಟ್ಟಣ ಪಂಚಾಯತ ಯಲಬುರ್ಗಾ ಇವರ ಸಂಯುಕ್ತ ಆಶ್ರಯದಲ್ಲಿ ವಿಶ್ವ ಪರಿಸರ ದಿನಾಚರಣೆ ನಿಮಿತ್ತ ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಯಲಬುರ್ಗಾದಲ್ಲಿ ಸಸಿ ನೆಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಶ್ರೀ ಶರಣಪ್ಪ ವಿರಾಪೂರ ತಾಲೂಕ ದೈಹಿಕ ಶಿಕ್ಷಣಾಧಿಕಾರಿಗಳು ಸಸಿ ನೆಡುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ತಾಲೂಕಿನ ವಿವಿಧ ಘಟಕಗಳ ಸ್ಕವಟ್ಸ್-ಗೈಡ್ಸ್‌ಗಳು ತಾಲುಕ ಮತ್ತು ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು. ನಂತರ ಪಟ್ಟಣ ಪ್ರಮುಖ ಬೀದಿಯ ಮೂಲಕ ಪರಿಸರ ಹಾಗೂ ಯೋಗ ಜಾಗೃತಿಯ ಘೋಷಣೆ ಕೂಗುತ್ತಾ 5ನೇ ಅಂತರ ರಾಷ್ಟ್ರೀಯ ಯೋಗ ದಿನಾಚರಣೆ ಮತ್ತು 2019-20ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಯ ಕೈಪಿಡಿ ಬಿಡುಗಡೆ ಸಮಾರಂಭಕ್ಕೆ ಪಟ್ಟಣದ ರಂಗಮಂದಿರಕ್ಕೆ ಬರಲಾಯಿತು.

5ನೇ ಅಂತರ ರಾಷ್ಟ್ರೀಯ ಯೋಗ ದಿನಾಚರಣೆ ಅಂಗವಾಗಿ ಶ್ರೀ ಪರಮ ಪೂಜ್ಯ ಬಸವಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು ಶ್ರೀಧರ ಮುರಡಿ ಹಿರೇಮಠ ಯಲಬುರ್ಗಾ ಇವರು ಯೋಗಾಸನಗಳು ಮತ್ತು ಯೋಗ ಪಟುಗಳು







ತಾಲೂಕಿನ ವಿವಿಧ ಇಲಾಖೆಗಳ ಅಧಿಕಾರಿಗಳು ಯೋಗದಲ್ಲಿ ಭಾಗವಹಿಸಿದ್ದರು. ಯೋಗಾಸನ ಮುಗಿಸ ನಂತರ ವೇದಿಕೆ ಕಾರ್ಯಕ್ರಮ ಪ್ರಾರಂಭವಾಯಿತು. ದಿವ್ಯ ಸಾನಿಧ್ಯವನ್ನು ಶ್ರೀ ಪರಮ ಪೂಜ್ಯ ಬಸವಲಿಮಗೇಶ್ವರ ಪ್ರಾಸ್ತಾವಿಕವಾಗಿ ಶ್ರೀ ಸುರೇಶಗೌಡ ಶಿವನಗೌಡ್ರ ಮಾತನಾಡಿದರು. ಪರಮ ಪೂಜ್ಯರು ಮತ್ತು ವೀರಣ್ಣ ಹುಬ್ಬಳ್ಳಿಯವರು ಸಸಿಗೆ ನೀರು ಎರೆಯುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶ್ರೀ ವೀರಣ್ಣ ಹುಬ್ಬಳ್ಳಿಯವರು ಯೋಗದಿಂದ ರೋಗಮುಕ್ತಿ, ಯೋಗವು ಸ್ವಸ್ಥ ಸಮಾಜವನ್ನು ಕೈಪಿಡಿ ಪುಸ್ತಕ ಬಿಡುಗಡೆಯನ್ನು ಪರಮಪೂಜ್ಯರು ನೆರವೇರಿಸಿದರು. ಶ್ರೀಕಾಂತ ಮಾಸಗಟ್ಟಿ ಜಿಲ್ಲಾ ತರಬೇತಿ ಆಯುಕ್ತರು ಮಾತನಾಡುತ್ತಾ, ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಹಮ್ಮಿಕೊಳ್ಳುವ ಕಾರ್ಯಚಟುವಟಿಕೆಗಳ ಪುಸ್ತಕ ಬಿಡುಗಡೆ ಕುರಿತು ತಿಳಿಸಿದರು.

## ಕೋಲಾರ

ಜೂನ್ 5 ರಂದು ಜಿಲ್ಲಾ ಸಂಸ್ಥೆ, ವಿಜಯವಾಣಿ ದಿನಪತ್ರಿಕೆ, ದಿಗ್ವಿಜಯ ಚಾನಲ್, ಜಿಲ್ಲಾ ಆಡಳಿತ ಮತ್ತು ಅರಣ್ಯ ಇಲಾಖೆಯ ಸಹಯೋಗದಲ್ಲಿ "ವಿಶ್ವಪರಿಸರ ದಿನಾಚರಣೆ"ಯನ್ನು ಆಚರಿಸಲಾಯಿತು. ಕೋಲಾರ ನಗರದ ರೈಲ್ವೆ ನಿಲ್ದಾಣದಲ್ಲಿ 325 ಗಿಡಗಳನ್ನು ನೆಡಲಾಯಿತು. ಈ ಕಾರ್ಯಕ್ರಮಕ್ಕೆ ಜಿಲ್ಲಾಧಿಕಾರಿಗಳಾದ ಶ್ರೀ ಮಂಜುನಾಥ್, ಜಿಲ್ಲಾ ಪಂಚಾಯ್ತಿ ಮುಖ್ಯ ಕಾರ್ಯನಿರ್ವಹಣ ಅಧಿಕಾರಿಗಳಾದ ಶ್ರೀ ಜಗದೀಶ್ ಹಾಗೂ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀಮತಿ ರೋಹಿಣಿ ಕಟೋಚ್ ಸಪೇಟ್ ರವರು ಚಾಲನೆ



ನೀಡಿ ಶುಭಕೋರಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ಹಾಗೂ ಪದಾಧಿಕಾರಿಗಳು ಭಾಗವಹಿಸಿದ್ದರು.

* ಜೂನ್ 9ರಂದು ಕೋಲಾರ ನಗರದ ಸೋಮೇಶ್ವರ ದೇವಾಲಯದಲ್ಲಿನ ಕಲ್ಯಾಣಿಯನ್ನು ಕೋಲಾರ ಇಂಡಿಯನ್ ಮತ್ತು ಈಗಲ್ಸ್ ಕ್ರೀಡಾ ಸಂಘ ಮತ್ತು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಸದಸ್ಯರುಗಳು ಸ್ವಚ್ಛಗೊಳಿಸಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಸಂಘಟಕ ಶ್ರೀ ಬಾಬು, ಜಿಲ್ಲಾ ಸ್ಥಾನಿಕ ಆಯುಕ್ತ ಶ್ರೀ ತ್ಯಾಗರಾಜ್, ಕೋಲಾರ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಆರ್. ಮಧು, ಯುವ ಸಮಿತಿ ಸದಸ್ಯರಾದ ಶ್ರೀ ಕುಪೇಂದ್ರಗೌಡ ರವರು ಭಾಗವಹಿಸಿದ್ದರು.

* ಜೂನ್ 10 ರಂದು ಬಂಗಾರಪೇಟೆಯ ಜೈನ್ ಇಂಟರ್ ನ್ಯಾಷನಲ್ ಶಾಲೆಯಲ್ಲಿ ಪರಿಸರ ದಿನಾಚರಣೆಯನ್ನು ಆಚರಿಸಿ ಶಾಲಾ ಆವರಣದಲ್ಲಿ ಗಿಡಗಳನ್ನು ನೆಟ್ಟು ಆಚರಿಸಲಾಯಿತು. ಈ ಕಾರ್ಯಕ್ರಮಕ್ಕೆ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆಂಪಯ್ಯ ಹಾಗೂ ಜಿಲ್ಲಾ ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ದೇವರ್ ಹಾಗೂ ಶಾಲಾ ಆಡಳಿತಾಧಿಕಾರಿ ಶ್ರೀ ವಿನೋದ್ ರವರು ಗಿಡ ನೆಟ್ಟು ಚಲನೆ ನೀಡಿದರು. ನಂತರ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳಿಂದ ಬಂಗಾರಪೇಟೆಯ ಹೊರವಲಯದ ವೃಕ್ಷೋಧ್ಯಾನದಲ್ಲಿನ ಪ್ಲಾಸ್ಟಿಕ್‌ಅನ್ನು ಸಂಗ್ರಹಿಸಿದರು. ನಮತರ ಸುಮಾರು 7500 ಬೀಜದ ಉಂಡೆಗಳನ್ನು ಮಾಡಲಾಯಿತು.

* ಜೂನ್ 15 ರಂದು ಬಂಗಾರಪೇಟೆಯ ಆಶ್ಲೇ ಇಂಟರ್ ನ್ಯಾಷನಲ್ ಶಾಲೆಯ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳಿಂದ ಸುಮಾರು 5500 ಬೀಜದುಂಡೆಗಳನ್ನು ಮಾಡಲಾಯಿತು.

* ಜೂನ್ 21ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಬಂಗಾರಪೇಟೆ ಸ್ಥಳೀಯ ಸಂಸ್ತೆ ಧರ್ಮಸ್ಥಳ ಗ್ರಾಮಾಭಿವೃದ್ಧಿ ಸಂಸ್ಥೆಯ ಸಂಯುಕ್ತ ಆಶ್ರಯದಲ್ಲಿ ವಿಶ್ವಯೋಗ ದಿನಾಚರಣೆ ಹಾಗೂ ವಿಶ್ವ ಪರಿಸರ ದಿನಾಚರಣೆಯನ್ನು ಬೇತಮಂಗಲದ ಭವಾನಿ ವಿದ್ಯಾಸಂಸ್ಥೆಯುಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದ ಅಂಗವಾಗಿ ಬೆಳಿಗ್ಗೆ ಮಕ್ಕಳಿಗೆ ಯೋಗದ ಅಭ್ಯಾಸ ಮಾಡಿಸಲಾಯಿತು. ದೈಹಿಕ ಶಿಕ್ಷಕರಾದ ಶ್ರೀ ಬಳಿಗಾರ್ ಮಕ್ಕಳಿಗೆ ಯೋಗದ ಮಹತ್ವ ತಿಳಿಸಿದರು. ಕಾರ್ಯಕ್ರಮದಲ್ಲಿ ಸುಮಾರು 200 ಶಾಲಾ ಮಕ್ಕಳು ಹಾಗೂ ಶಿಕ್ಷಕರು ಪಾಲ್ಗೊಂಡಿದ್ದರು.

ಅರಣ್ಯ ಇಲಾಖೆಯವರು ನೀಡಿದ್ದ ವಿವಿಧ ರೀತಿಯ ಬೀಜಗಳಿಂದ ಮಣ್ಣನ್ನು ಬೆರೆಸಿ ಅದರಲ್ಲಿ ಬೀಜಗಳನ್ನು ಇಟ್ಟು






ಬೀಜದ ಉಂಡೆಗಳನ್ನು ತಯಾರಿಸಲಾಯಿತು. ಈ ಕಾರ್ಯದಲ್ಲಿ ಸುಮಾರು 150 ಸ್ಕೌಟ್-ಗೈಡ್‌ಗಳು, ವಿವಿಧ ಶಾಲಾ ಮಕ್ಕಳು ಹಾಗೂ ಧರ್ಮಸ್ಥಳ ಗ್ರಾಮಾಭಿವೃದ್ಧಿ ಸಂಘದ ಮಹಿಳೆಯರು ಭಾಗವಹಿಸಿದ್ದರು.

ಈ ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಬಂಗಾರಪೇಟೆ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಶಂಕರಪ್ಪ, ತರಬೇತಿ ನಾಯಕರಾದ ಶ್ರೀ ನಂಜುಂಡಪ್ಪ, ಖಜಾಂಚಿ ಶ್ರೀ ಎಂ.ಎಂ. ಬಳಿಗಾರ್, ಸಹಕಾರ್ಯದರ್ಶಿ ಶ್ರೀ ನಾರಾಯಣಸ್ವಾಮಿ, ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ಸತೀಶ್, ತಾಲ್ಲೂಕು ಸಂಘಟಕರಾದ ಶ್ರೀ ಪುರುಷೋತ್ತಮ ರೆಡ್ಡಿ, ಗೈಡ್ ಕ್ಯಾಪ್ಟನ್‌ಗಳಾದ ಶ್ರೀಮತಿ ಭಾರ್ಗವಿರೆಡ್ಡಿ, ಶ್ರೀಮತಿ ಅರುಣ, ವಲಯ ಅರಣ್ಯಾಧಿಕಾರಿಗಳಾದ ಶ್ರೀಮತಿ ಸಾವಿತ್ರಮ್ಮ, ಧರ್ಮಸ್ಥಳ ಗ್ರಾಮಾಭಿವೃದ್ಧಿ ಸಂಸ್ಥೆಯ ಜಿಲ್ಲಾ ಸಮನ್ವಯಾಧಿಕಾರಿ ಶ್ರೀ ಶಿವಕುಮಾರ್, ಕೃಷಿ ಮೇಲ್ವಿಚಾರಕರಾದ ಶ್ರೀ ವಸಂತ್ ಹಾಗೂ ಭವಾನಿ ವಿದ್ಯಾ ಸಂಸ್ಥೆಯ ಶಾಲಾ ಸಿಬ್ಬಂದಿ ಭಾಗವಹಿಸಿದ್ದರು.

## ಹಾಸನ

ಹೊಳೆನರಸೀಪುರ, ಮೇ 2 ರಿಂದ 9 ರ ವರೆಗೆ ಏಳು ದಿನಗಳ ಕಾಲ ಬೇಸಿಗೆ ಶಿಬಿರವನ್ನು ಸ.ಹಿ. ಪ್ರಾ. ಶಾಲೆ, ಕೋಟೆ ಇಲ್ಲಿ ಹಮ್ಮಿಕೊಂಡಿದ್ದು, ಈ ಶಿಬಿರವನ್ನು ತಹಸಿಲ್ದಾರ್ ಶ್ರೀ ಶ್ರೀನಿವಾಸ ರವರು ಉದ್ಘಾಟಿಸಿ ಮಾತನಾಡಿ ಬೇಸಿಗೆ ಶಿಬಿರದಿಂದ ಮಕ್ಕಳಿಗೆ ತುಂಬಾ ಚೈತನ್ಯ ತುಂಬುತ್ತದೆ ಮತ್ತು ವಿದ್ಯಾರ್ಥಿಗಳಲ್ಲಿರುವ ವ್ಯಕ್ತಿತ್ವ ವಿಕಸನಗೊಳ್ಳುತ್ತದೆ ಎಂದು ಅಭಿಪ್ರಾಯಪಟ್ಟರು. ಸ್ವಾಮಿ ವಿವೇಕಾನಂದ ಯುವವೇದಿಕೆಯ ಅಧ್ಯಕ್ಷ ಶ್ರೀ ರೆಹಮಾನ್ ಮುಖ್ಯ ಅತಿಥಿಯಾಗಿ ಮಾತನಾಡಿ ಇಂದಿನ ಯುವಪೀಳಿಗೆ ಟಿ.ವಿ. ಹಾಗೂ ಮೊಬೈಲ್‌ಗಳಿಗೆ ಮಾರು-ಹೋಗಿರುವುದು ಆತಂಕದ ವಿಚಾರ ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು. ಈ ಸಂದರ್ಭದಲ್ಲಿ ನಿವೃತ್ತ ಯೋಧ ಶ್ರೀ ವಸಂತಕುಮಾರ್, ಚುಟುಕು ಸಾಹಿತ್ಯ ಪರಿಷತ್ ಅಧ್ಯಕ್ಷೆ ಶ್ರೀಮತಿ ಪ್ರೇಮ ಮಂಜುನಾಥ್, ಶ್ರೀ ಶಂಕರನಾರಾಯಣ್ ಐತಾಳ್ ಶ್ರೀ ಮಂಜುನಾಥ್ ಗುಪ್ತ, ತಾಲ್ಲೂಕು ಕಾರ್ಯದರ್ಶಿ ಶ್ರೀ ನಾರಾಯಣ ಶೆಟ್ಟಿ, ಜಂಟಿ ಕಾರ್ಯದರ್ಶಿ ಶ್ರೀಮತಿ ಕುಮುದ ಆರ್. ಖಜಾಂಚಿ ಶ್ರೀಮತಿ ನಾಗವೇಣಿ ಹಾಗೂ 75 ಮಕ್ಕಳು ಭಾಗವಹಿಸಿದ್ದರು.

* ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಜಿಲ್ಲಾಡಳಿತ, ಅರಣ್ಯ ಇಲಾಖೆ, ಸಾರ್ವಜನಿಕ ಶಿಕ್ಷಣ ಇಲಾಖೆ, ನಗರ ಸಭೆ, ಜಿಲ್ಲಾ ವಕೀಲರ ಸಂಘ ಹಾಗೂ ಸ್ಕೌಟ್ಸ್-ಗೈಡ್ಸ್ ಸಂಸ್ಥೆ, ಹಾಸನ ಇವರ ಸಂಯುಕ್ತಾಶ್ರಯದಲ್ಲಿ ಜೂನ್ 5 ರಂದು ಸತ್ಯ ಮಂಗಳ ಕೆರೆಯಲ್ಲಿ ವಿಶ್ವ ಪರಿಸರ ದಿನಾಚರಣೆಯನ್ನು ಸತ್ಯ ಮಂಗಳ ಕೆರೆಯ ಸುತ್ತ-ಮುತ್ತ ಗಿಡಗಳನ್ನು ನೆಡುವುದರ ಮೂಲಕ ಆಚರಣೆ ಮಾಡಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಪಂಚಾಯತ್ ಕಾರ್ಯನಿರ್ವಹಣಾಧಿಕಾರಿ ಗಳಾದ ಡಾ. ವಿಜಯ ಪ್ರಕಾಶ್, ಕೆ.ಎನ್. ರವರು ಮತ್ತು ಉಪವಿಭಾಗ ಅಧಿಕಾರಿಗಳು ಡಾ॥ ನಾಗರಾಜ್, ಜಿಲ್ಲಾ ದೈಹಿಕ ಅಧೀಕ್ಷರಾದ ಶ್ರೀ ವೆಂಕಟೇಶ್ ಮೂರ್ತಿ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ವೈಎಸ್. ವೀರಭದ್ರಪ್ಪ, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಎಂ.ಬಿ. ಗಿರಿಜಾಂಬಿಕಾ, ಜಿಲ್ಲಾ ಸಂಘಟಕರು ಕು. ಪ್ರಿಯಾಂಕಾ ಹೆಚ್.ಎಂ. ಫ್ಲಾಕ್ ಲೀಡರ್ ಶ್ರೀಮತಿ ಕೆ.ಸಿ. ಗೀತ ಹಾಗೂ 20ಸ್ಕೌಟ್-ಗೈಡ್‌ಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಶಿವಮೊಗ್ಗ

ಮೇ 31ರಂದು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಕೇಂದ್ರದಲ್ಲಿ ನಡೆದ ಉಪನಿರ್ದೇಶಕ ಆಡಳಿತ ಹಾಗೂ ಅಭಿವೃದ್ಧಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಕ್ಷೇತ್ರ ಸಂಪನ್ಮೂಲ ವ್ಯಕ್ತಿಗಳ ಸಮಾವೇಶದಲ್ಲಿ ಜಿಲ್ಲಾ ಉಪನಿರ್ದೇಶಕರಾದ (ಆಡಳಿತ) ಶ್ರೀಮತಿ ಸುಮಂಗಳಾ ಪಿ. ಕುಚಿನಾಡ, ಉಪನಿರ್ದೇಶಕರಾದ ಶ್ರೀ ಸಿ. ಮಂಜುನಾಥಯ್ಯ, ಶಿವಮೊಗ್ಗ, ಜಿಲ್ಲೆಯ ಏಳು ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಕ್ಷೇತ್ರ ಸಂಪನ್ಮೂಲ ವ್ಯಕ್ತಿಗಳು ಉಪಸ್ಥಿತರಿದ್ದರು.

ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀಮತಿ ಭಾರತಿ ಡಯಾಸ್‌ರವರು 2018–19ನೇ ಸಾಲಿನಲ್ಲಿ ಜರುಗಿದ ಎಲ್ಲಾ ಕಾರ್ಯಚಟುವಟಿಕೆಗಳಿಗೆ ಸಹಾಯ, ಸಹಕಾರ ಮತ್ತು ಪ್ರೋತ್ಸಾಹ ನೀಡಿದ ಜಿಲ್ಲಾ ಉಪನಿರ್ದೇಶಕರುಗಳಿಗೆ, ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಹಾಗೂ ಕ್ಷೇತ್ರ ಸಂಪನ್ಮೂಲ ವ್ಯಕ್ತಿಗಳಿಗೆ ವಂದನೆಗಳನ್ನು ಸಲ್ಲಿಸಿ ಇದೇ ರೀತಿಯ ಸಹಕಾರವನ್ನು 2019–20ನೇ ಸಾಲಿನಲ್ಲಿಯೂ ನಿರೀಕ್ಷಿಸುವುದಾಗಿ ತಿಳಿಸುವ ಮೂಲಕ ಕಳೆದ ಬಾರಿ ಅಂಕಿ–ಅಂಶಗಳಲ್ಲಾದ ಏರಿಕೆಯ ಪ್ರಮಾಣವನ್ನು ಸಭೆಗೆ ವಿವರವಾಗಿ ತಿಳಿಸಿದರು.

ನಂತರ ಜಿಲ್ಲೆಯ ತರಬೇತಿ ಆಯುಕ್ತರಾದ ಶ್ರೀ ಟಿ.ಎ. ಮಂಜುನಾಥಾಚಾರ್ ರವರು 2019–20ನೇ ಸಾಲಿನ ಜೂನ್, ಜುಲೈ ಮತ್ತು ಆಗಸ್ಟ್ ತಿಂಗಳಿನಲ್ಲಿ ಜರುಗಲಿರುವ ಕಾರ್ಯಕ್ರಮಗಳ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದರು. ಜೂನ್ ತಿಂಗಳಿನಲ್ಲಿ ನಡೆಯಲಿರುವ ಮುಖ್ಯೋಪಾಧ್ಯಾಯರುಗಳ ಮಾಹಿತಿ ಶಿಬಿರಕ್ಕೆ ಹಾಗೂ ಪ್ರಾರಂಭಿಕ ತರಬೇತಿ ಶಿಬಿರಕ್ಕೆ ಮುಖ್ಯೋಪಾಧ್ಯಾಯರನ್ನು ಹಾಗೂ ಶಿಕ್ಷಕ/ ಶಿಕ್ಷಕಿಯರನ್ನು ನಿಯೋಜಿಸುವಂತೆ ವಿನಂತಿಸಿದರು.

ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ವೈ.ಆರ್. ವೀರೇಶಪ್ಪರವರು ವಂದನೆಗಳನ್ನು ಸಲ್ಲಿಸಿದರು. ಸಭೆಯ ಕೊನೆಯಲ್ಲಿ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಮೂರು ತಿಂಗಳ ಕಾರ್ಯಚಟುವಟಿಕೆಗಳ ಮಾಹಿತಿಯ ಪಟ್ಟಿಯನ್ನು ನೀಡಲಾಯಿತು.



## ಉಡುಪಿ

ಜಿಲ್ಲಾ ಆರೋಗ್ಯ ಇಲಾಖೆ, ಭಾರತೀಯ ವೈದ್ಯಕೀಯ ಸಂಘ ಮತ್ತು ಭಾರತ್ ಸ್ಕೌಟ್ಸ್–ಗೈಡ್ಸ್ ಜಿಲ್ಲಾ ಸಂಸ್ಥೆ ಉಡುಪಿ ಸಹಯೋಗದಲ್ಲಿ "ವಿಶ್ವ ತಂಬಾಕು ರಹಿತ ದಿನಾಚರಣೆ" ಪ್ರಯುಕ್ತ ತಂಬಾಕು ಜಾಗೃತಿ ಜಾಥಾ ಮತ್ತು ಮಾಹಿತಿ ಕಾರ್ಯಕ್ರಮವನ್ನು ತಂಬಾಕು ಮತ್ತು ಶ್ವಾಸಕೋಶದ



ಖಾಯಿಲೆಗಳು ಎಂಬ ಘೋಷವಾಕ್ಯದಡಿಯಲ್ಲಿ ಮೇ 31 ರ ಬೆಳಿಗ್ಗೆ 8ಗಂಟೆಯಿಂದ ಜಿಲ್ಲಾ ಆಸ್ಪತ್ರೆಯಲ್ಲಿ ಆಯೋಜಿಸಲಾಯಿತು. ಉಡುಪಿ ಬೋರ್ಡ್ ಹೈಸ್ಕೂಲಿನಿಂದ ಸರ್ವಿಸ್ ಬಸ್ ನಿಲ್ದಾಣ, ಡಯಾನ ಸರ್ಕಲ್ ಮಾರ್ಗವಾಗಿ ಜಿಲ್ಲಾ ಆಸ್ಪತ್ರೆಯವರೆಗೆ ತಂಬಾಕು ಬಗ್ಗೆ ಜಾಥಾ ನಡೆಸಲಾಯಿತು. ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಡಾ॥ ವಿಜಯೇಂದ್ರ ವಸಂತ್ ಕಾರ್ಯಕ್ರಮದಲ್ಲಿ ಭಾಗವಹಿಸಿ ಶುಭ ಹಾರೈಸಿದರು. ಈ ಜಾಥಾ ಕಾರ್ಯಕ್ರಮದಲ್ಲಿ 60 ಸ್ಕೌಟ್ಸ್/ಗೈಡ್ಸ್, ರೋವರ್/ರೇಂಜರ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾ ಸಂಘಟಕರಾದ ಶ್ರೀಮತಿ ಸುಮನ್ ಶೇಖರ್ ಹಾಗೂ ಶ್ರೀ ನಿತಿನ್ ಅಮಿನ್ ಕಾರ್ಯಕ್ರಮವನ್ನು ಸಂಘಟಿಸಿದರು.

## ವಿಜಯಪುರ

ಜೂನ್ 20 ರಂದು ವಿಜಯಪುರ ಜಿಲ್ಲಾಡಳಿತ, ಜಿಲ್ಲಾ ಆಯುಷ್ ಇಲಾಖೆ ಇವರ ಸಹಯೋಗದಲ್ಲಿ ನಡೆದ ಯೋಗ ದಿನಾಚರಣೆಯ ಜಾಥಾ ಕಾರ್ಯಕ್ರಮದಲ್ಲಿ ಭಾ.ಸ್ಕೌ. ಸ್ಕೌಟ್ಸ್–ಗೈಡ್ಸ್ ಜಿಲ್ಲಾ ಸಂಸ್ಥೆ, ವಿಜಯಪುರದ ಸ್ಕೌಟ್ಸ್–ಗೈಡ್ಸ್‌ಗಳು ಶಿಕ್ಷಕರೊಂದಿಗೆ ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ನಾಗೇಶ ಆರ್. ಶಿವಪೂರ ಹಾಗೂ ಶ್ರೀ ಎಸ್.ಜಿ.ವಿ. ರಾಜಶೇಖರ ಖೇಡಗಿ ಸ್ಕೌಟ್ಸ್ ಮಾಸ್ಟರ್ಸ್–ಗೈಡ್ ಕ್ಯಾಪ್ಟನ್ಸ್ ಉಪಸ್ಥಿತರಿದ್ದರು.

ಜಾಥಾ ಮುಗಿದ ನಂತರ ಸ್ಕೌಟ್–ಗೈಡ್‌ಗಳು ಜಿಲ್ಲಾಧಿಕಾರಿಗಳ ಕಛೇರಿಯಿಂದ ಡಿ.ಡಿ.ಪಿ.ಐ. ಕಛೇರಿಗೆ ತೆರಳಿ ಡಿ.ಡಿ.ಪಿ.ಐ. ಕಛೇರಿ ಆವರಣವನ್ನು ಸ್ವಚ್ಛಗೊಳಿಸಿದರು.





ಈ ಸಂದರ್ಭದಲ್ಲಿ ಮಾತನಾಡಿದ ಮಾನ್ಯ ಉಪನಿರ್ದೇಶಕ (ಡಿ.ಡಿ.ಪಿ.ಐ.) ರಾದ ಶ್ರೀ ಪ್ರಸನ್ನಕುಮಾರ ರವರು ಸೇವಾ ಮನೋಭಾವ ನಿಮ್ಮೆಲ್ಲರಲ್ಲಿ ಸದಾ ಹಿಗೆ ಇರಲೆಂದು ಎಲ್ಲ ಮಕ್ಕಳಿಗೂ ಶುಭ ಹಾರೈಸಿದರು.

* ಜೂನ್ 21 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಸ್ಥಳೀಯ ಸಂಸ್ಥೆ ಮತ್ತು ಸೆಂಟ್ ಜೋಸೆಫ್ ಶಿಕ್ಷಣ ಸಂಸ್ಥೆ, ವಿಜಯಪುರ ಇವರ ಸಹಯೋಗದಲ್ಲಿ 5ನೇ ಅಂತರಾಷ್ಟ್ರೀಯ ಯೋಗ ದಿನಾಚರಣೆ ಹಾಗೂ ವಿಶ್ವ ಪರಿಸರ ದಿನಾಚರಣೆ ಮತ್ತು 2019-20ನೇ ಸಾಲಿನ ಕಾರ್ಯಕ್ರಮ ತರಬೇತಿ ಯೋಜನೆ ಪುಸ್ತಕ ಬಿಡುಗಡೆ ಸಮಾರಂಭ ಶ್ರೀ ಸಿದ್ಧಣ್ಣ ಎಂ. ಸಕ್ರಿ, ಜಿಲ್ಲಾ ಪ್ರದಾನ ಆಯುಕ್ತರು ವಿಜಯಪುರ ಇವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ಡಾ॥ ಪ್ರಭುಗೌಡ ಪಾಟೀಲ ಅಧ್ಯಕ್ಷರು ಸ್ಥಳೀಯ ಸಂಸ್ಥೆ ವಿಜಯಪುರ ಇವರು ಎಲ್ಲರೊಂದಿಗೆ ಜ್ಯೋತಿ ಬೆಳಗಿಸಿ ಮತ್ತು ಸಸಿಗೆ ನೀರೆರೆದು ಸಮಾರಂಭ ಉದ್ಘಾಟಿಸಿ ಯೋಗ ಮತ್ತು ಪರಿಸರ ದಿನಾಚರಣೆ ಮಹತ್ವ ಕುರಿತು ಮಾತನಾಡಿದರು. ಮುಖ್ಯ ಅತಿಥಿಗಳಾದ ಶ್ರೀ ಸಹಜಾನಂದ ದಂದರಗಿ ಜಿಲ್ಲಾ ಖಜಾಂಚಿಗಳು ಶ್ರೀ ಎಸ್.ಎಲ್. ಇಂಗಳೇಶ್ವರ ಜಿಲ್ಲಾ ಸ್ಥಾನಿಕ ಆಯುಕ್ತರು (ಸ್ಕೌ) ಶ್ರೀಮತಿ ವಿದ್ಯಾವತಿ ಅಂಕಲಗಿ ಜಿಲ್ಲಾ ಸ್ಥಾನಿಕ ಆಯುಕ್ತರು(ಗೈ) ಶ್ರೀ ಗಂಗಶೆಟ್ಟಿ ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿಗಳು, ಶ್ರೀ ಆನಂದ ಬಿರಾದಾರ ಹಿರಿಯ ಉಪನ್ಯಾಸಕರು, ಶ್ರೀ ಪ್ರೇಮಾನಂದ ನಗರ ಸಭೆ ಕಾರ್ಪೋರೇಟರ್, ಶ್ರೀಮತಿ ಎಸ್.ಎಸ್. ಪಾಟೀಲ್ ಯೋಗ ಗುರೂಜಿ ಇವರ ಉಪಸ್ಥಿತಿಯಲ್ಲಿ ಪುಸ್ತಕ ಬಿಡುಗಡೆ ಸಮಾರಂಭ ಹಾಗೂ ಸಸಿ ನೆಡುವ ಕಾರ್ಯಕ್ರಮ ನಡೆಯಿತು. ಈ ಕಾರ್ಯಕ್ರಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನಗರದ ಬೇರೆ ಬೇರೆ ಶಾಲೆಗಳಿಂದ ಆಗಮಿಸಿದ ಮುಖ್ಯೋಪಾಧ್ಯಾಯರು, ಸ್ಕೌಟರ್ಸ್-ಗೈಡರ್ಸ್, ಶಿಕ್ಷಕರು ಮತ್ತು ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಇವರಿಗೆ ಯೋಗ ಗುರೂಜಿ ಶ್ರೀಮತಿ ಎಸ್.ಎಸ್. ಪಾಟೀಲ್ ಯೋಗ ಶಿಕ್ಷಣದ ತರಬೇತಿಯನ್ನು ನೀಡಿದರು. ಸೇಂಟ್ ಜೋಸೆಫ್ ಶಾಲೆಯ ವಿದ್ಯಾರ್ಥಿಗಳು ಯೋಗ ಪ್ರದರ್ಶನ ಕಾರ್ಯಕ್ರಮವನ್ನು ಕೊಟ್ಟರು. ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಎಲ್ಲರನ್ನೂ ಸ್ವಾಗತಿಸಿದರು. ಶ್ರೀ ಅಶೋಕ ಚಳ್ಳಗಿ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಇವರು ಎಲ್ಲರಿಗೂ ಪುಷ್ಪಾರ್ಚನೆ ಮಾಡಿದರು. ಎ.ಎಸ್.ಓ.ಸಿ. (ಸ್ಕೌಟ್) ಶ್ರೀ ನಾಗೇಶ್ ಆರ್. ಶಿವಪುರ ಪ್ರಾಸ್ತಾವಿಕ ನುಡಿ ನುಡಿದರು. ಎಸ್.ಜಿ.ವಿ. ಶ್ರೀ ರಾಜಶೇಖರ ಖೇಡಗಿ ಎಲ್ಲರಿಗೂ ವಂದಿಸಿದರು. ಸ್ಕೌಟ್ಸ್ ಮಾಸ್ಟರ್ ಶ್ರೀ ಪಿ.ಎಲ್. ಹದ್ಲಿ ಕಾರ್ಯಕ್ರಮ ನಿರೂಪಿಸಿದರು.

## ಯಾದಗಿರಿ

ಜೂನ್ 21ರಂದು ವಿಶ್ವಯೋಗ ಹಾಗೂ ಪರಿಸರ ದಿನ ಪ್ರಯುಕ್ತ ಸ್ಥಳೀಯ ಸಂಸ್ಥೆ ಶಹಾಪುರ ವತಿಯಿಂದ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಪೇಡ ಶಹಾಪುರದಲ್ಲಿ ಸಸಿ ನೆಡುವದರ ಮೂಲಕ ಪರಿಸರ ದಿನ ಆಚರಿಸಲಾಯಿತು.

ನಂತರ ಶಹಾಪುರ ನಗರದ ಸುಮಾರು 100 ಸ್ಕೌಟ್ಸ್-ಗೈಡ್ಸ್‌ಗಳು ಯೋಗದಿನದ ಪ್ರಯುಕ್ತ ಯೋಗಾಭ್ಯಾಸ ಮಾಡಲಾಯಿತು. ಶ್ರೀ ಲಕ್ಷ್ಮಣ ಲಾಳ ಸೇರಿ ಯೋಗವನ್ನು ಮಕ್ಕಳಿಗೆ ಹೇಳಿಕೊಟ್ಟಿತು. ಈ ಕಾರ್ಯಕ್ರಮದಲ್ಲಿ ಶ್ರೀ ಚಂದ್ರಶೇಖರ ವೈದ್ಯ ತಾಲೂಕಾ ದೈಹಿಕ ಪರಿವೀಕ್ಷಕರು, ಶ್ರೀ ಸುಧಾಕರ ಗುಡಿ, ಜಿಲ್ಲಾ ಉಪಾಧ್ಯಕ್ಷರು ಶ್ರೀ ಬಸವರಾಜ ಗೋಗಿ ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ ಶ್ರೀಮತಿ ಗೌರಮ್ಮ. ಗೈಡ್ ಕಾರ್ಯದರ್ಶಿ ಶ್ರೀ ಉದಯ ಸ್ಕೌಟ್ ಮಾಸ್ಟರ್ ಶ್ರೀ ಶಿವಕುಮಾರ ಸ್ಕೌಟ್ ಮಾಸ್ಟರ್ ಹಾಜರಿದ್ದರು.





* ಜೂನ್ 21 ರಂದು ಎಸ್.ಎಮ್. ಜೈನ್ ಶಾಲೆಯಲ್ಲಿ ಶಹಾಪೂರ ತಾಲ್ಲೂಕಿನ ಎಲ್ಲಾ ಪ್ರಾಥಮಿಕ ಹಾಗೂ ಪ್ರೌಢಶಾಲಾ ಮುಖ್ಯ ಗುರುಗಳಿಗಾಗಿ ಮಾಹಿತಿ ಶಿಬಿರ ಮತ್ತು 2019-20 ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ ಯೋಜನಾ ಪುಸ್ತಕನ್ನು ಅನಾವರಣಗೊಳಿಸಲಾಯಿತು.

ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಸುಧಾಕರ ಗುಡಿ, ಜಿಲ್ಲಾ ಹಣಕಾಸು ಸಮಿತಿಯ ಸದಸ್ಯರಾದ ಶ್ರೀ ದಿನೇಶ ಜೈನ್, ಶ್ರೀ ಫೀರಪ್ಪ ಹೊಗಂಡ ಎ.ಎಲ್.ಟಿ.(ಎಸ್) ಶ್ರೀ ನಾಗರತ್ನ ಪಾಟೀಲ ಡಿ.ಓ. ಶ್ರೀ ಚಂದ್ರಶೇಖರ ವೈದ್ಯ ದೈಹಿಕ ಶಿಕ್ಷಣ ಪರಿವೀಕ್ಷಕರು, ಶ್ರೀಮತಿ ಉಮಾದೇವಿ ಜಿಲ್ಲಾ ಗೈಡರ್ ಶ್ರೀಮತಿ ಗೌರಮ್ಮ, ಗೈಡ್ ಕ್ಯಾಪ್ಟನ್, ಶ್ರೀ ಹಸನ ಸಾಬ ಸ್ಕೌಟ್ ಮಾಸ್ಟರ್ ಶ್ರೀ ಯಂಕಪ್ಪ ಸ್ಕೌ. ಮಾಸ್ಟರ್ ಹಾಜರಿದ್ದರು.

ವಿಶ್ವಯೋಗ ದಿನ ಪ್ರಯುಕ್ತ ಜಿಲ್ಲಾ ಆಯುಷ ಇಲಾಖೆಯಿಂದ ನಡೆದ ಶಾಲಾ ಮಕ್ಕಳಿಗಾಗಿ ಯೋಗಾಸನ, ಸ್ಪರ್ಧೆ, ಭಾಷಣ ಪ್ರಬಂಧ, ಸ್ಪರ್ಧೆ ಆಯೋಜಿಸಿದ್ದು, ಪ್ರಬಂಧ ಸ್ಪರ್ಧೆಯಲ್ಲಿ ರಾಜ್ಯ ಪುರಸ್ಕಾರ ಗೈಡ್ ಕುಮಾರಿ ಭೀಮಾಬಾಯಿ ಹಣಮಂತ, ಸ. ಪ್ರೌಢಶಾಲೆ, ಶಿರವಾಳ ಪ್ರಥಮ ಸ್ಥಾನ ಪಡೆದರೆ, ಕುಮಾರಿ ವಿಶ್ವರಾಧ್ಯ ಸ. ಬಾಲಕರ ಪ್ರೌಢಶಾಲೆ ಭಾಷಣದಲ್ಲಿ ಜಿಲ್ಲೆಗೆ ದ್ವಿತೀಯ ಸ್ಥಾನ ಪಡೆದು, ಶಹಾಪುರ ತಾಲೂಕಿನ ಸ್ಕೌಟ್-ಗೈಡ್‌ಗಳು ತಾಲೂಕು ಸಂಸ್ಥೆಗೆ ಕೀರ್ತಿ ತಂದರು.

# ಶ್ರದ್ಧಾಂಜಲಿ

ಭಾರತ ಸರ್ಕಾರದ ಪದ್ಮಶ್ರೀ ಮತ್ತು ಪದ್ಮವಿಭೂಷಣ ಹಾಗೂ ಸಾಹಿತ್ಯಕ್ಷೇತ್ರದ ಅತ್ಯುನ್ನತ ಪ್ರಶಸ್ತಿಯಾದ "ಜ್ಞಾನಪೀಠ ಪ್ರಶಸ್ತಿ" ಪುರಸ್ಕೃತರಾದ ಡಾ. ಗಿರೀಶ್ ಕಾರ್ನಾಡ್ ಅವರು 10 ಜೂನ್ 2019 ರಂದು ಬೆಂಗಳೂರಿನಲ್ಲಿ ನಿಧನ ಹೊಂದಿದರು.

ಇವರು ಶ್ರೇಷ್ಠ ಸಾಹಿತಿಗಳು, ನಾಟಕಕಾರರು ಮತ್ತು ಚಲನಚಿತ್ರಗಳ ನಿರ್ದೇಶಕರಾಗಿ ಹೆಚ್ಚಿನ ಯಶಸ್ಸನ್ನು ಗಳಿಸಿರುತ್ತಾರೆ. ಇವರು ಆಕ್ಸ್‌ಫರ್ಡ್ ಯೂನಿವರ್ಸಿಟಿಯಲ್ಲಿ ರಾಜಕೀಯ ಶಾಸ್ತ್ರ, ತತ್ವಶಾಸ್ತ್ರ ಮತ್ತು ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದು, 1963ರಲ್ಲಿ ವಿಶ್ವವಿದ್ಯಾಲಯದ ಚರ್ಚಾಕೂಟದ ವೇದಿಕೆಯಾದ ಆಕ್ಸ್‌ಫರ್ಡ್ ಯೂನಿಯನ್‌ನ ಅಧ್ಯಕ್ಷರಾಗಿದ್ದರು. ಇವರು ಭಾರತೀಯ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆ ಮತ್ತು ಕೇಂದ್ರ ಸಂಗೀತ ನಾಟಕ ಅಕಾಡೆಮಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. ಶ್ರೀ ಕಾರ್ನಾಡ್ ಅವರು ಹಲವಾರು ಚಿತ್ರಗಳು ಮತ್ತು ಸಾಕ್ಷ್ಯಚಿತ್ರಗಳನ್ನು ನಿರ್ದೇಶಿಸಿದ್ದಾರೆ ಹಾಗೂ ಕನ್ನಡ, ತೆಲುಗು ಮತ್ತು ಹಿಂದಿ ಚಿತ್ರಗಳಲ್ಲಿ ಅಭಿನಯಿಸಿರುತ್ತಾರೆ. ಚಿತ್ರರಂಗದಲ್ಲಿ ಹಲವು ರಾಷ್ಟ್ರೀಯ ಪ್ರಶಸ್ತಿಗಳನ್ನು ಪಡೆದಿರುತ್ತಾರೆ.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಹಾಗೂ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೋರಿ ಶ್ರದ್ಧಾಂಜಲಿಯನ್ನು ಅರ್ಪಿಸಿರುತ್ತಾರೆ. ದಯಾಮಯನಾದ ಭಗವಂತನು ಅವರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಮತ್ತು ಅವರ ಪತ್ನಿ ಮತ್ತು ಮಕ್ಕಳು ಹಾಗೂ ಬಂಧು-ಮಿತ್ರರಿಗೆ ಅವರ ಅಗಲಿಕೆಯ ದುಃಖವನ್ನು ಭರಿಸುವ ಶಕ್ತಿಕೊಡಲೆಂದು ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ

# ಹೊಟ್ಟೆನೋವು

– ಡಾ. ವಸುಂಧರಾ ಭೂಪತಿ

ಹಿಂದಿನ ಸಂಚಿಕೆಯಿಂದ...

## ಮನೆ ಔಷಧಿ :

* 50 ಗ್ರಾಂ ಜೀರಿಗೆ ಮತ್ತು 5 ಗ್ರಾಂ ಶುಂಠಿಯನ್ನು ಒಂದು ಲೋಟ ನೀರಿನಲ್ಲಿ ಕುದಿಸಿ ಕಾಲು ಭಾಗಕ್ಕೆ ಇಳಿಸಿ, ಅರ್ಧ ಹೋಳು ನಿಂಬೆರಸ ಸೇರಿಸಿ, ರುಚಿಗೆ ತಕ್ಕಷ್ಟು ಬೆಲ್ಲದೊಂದಿಗೆ ದಿನಕ್ಕೆ ಮೂರು ಬಾರಿ ಊಟಕ್ಕೆ ಮುಂಚೆ 1/4 ಲೋಟ ಕುಡಿಯಬೇಕು. ಮಕ್ಕಳಿಗೆ 4 ಚಮಚೆ ಕೊಡಬೇಕು.
* ಒಂದು ಚಮಚೆ ಓಮದಕಾಳಿನ ಪುಡಿ (ಅಜವಾನ) ಮತ್ತು ಒಂದು ಚಿಟಿಕೆ ಸೈಂಧವ ಲವಣದ ಪುಡಿ ಸೇರಿಸಿ ಬಿಸಿನೀರಿನಲ್ಲಿ ಕದಡಿ ಕುಡಿಯಬೇಕು.
* ಅಜವಾನ 4 ಭಾಗ, ಶುಂಠಿ 1/4 ಭಾಗ, ಸೈಂಧವ ಲವಣ 1 ಭಾಗ, ಜಾಯಿಕಾಯಿ 1/4 ಭಾಗ ಇವುಗಳನ್ನು ನುಣ್ಣಗೆ ಪುಡಿ ಮಾಡಿ ಒಂದು ಚಮಚೆಯಷ್ಟನ್ನು ಬಿಸಿನೀರಿನಲ್ಲಿ ಸೇರಿಸಿ ಸೇವಿಸಿದರೆ ನೋವು ಕಡಿಮೆಯಾಗುತ್ತದೆ.
* 10 ಗ್ರಾಂ ಸೊಗದೆಬೇರನ್ನು ನೀರಿನಲ್ಲಿ ಕುದಿಸಿ ಕಾಲುಭಾಗಕ್ಕೆ ಇಳಿಸಿ, ಒಂದು ಲೋಟ ಹಾಲಿಗೆ ಕಷಾಯ ಬೆರೆಸಿ ದಿನಕ್ಕೆ ಮೂರು ಬಾರಿ ಕುಡಿಯಬೇಕು.
* ವಾಯುವಿಳಂಗದ ಬೇರಿನ ಪುಡಿ ಒಂದು ಚಮಚೆ ಮತ್ತು ಅರ್ಧ ಚಮಚೆ ನಿಂಬೆರಸವನ್ನು ಎರಡು ಲೋಟ ನೀರಿನಲ್ಲಿ ಹಾಕಿ ಚಿಟಿಕೆ ಸೈಂಧವ ಲವಣ ಮತ್ತು ಚಿಟಿಕೆ ಹುರಿದ ಜೀರಿಗೆ ಪುಡಿ ಬೆರೆಸಿ ಊಟಕ್ಕೆ ಮುಂಚೆ ಕುಡಿಯಬೇಕು.
* ಒಂದು ಲೋಟ ಜೀರಿಗೆ ಕಷಾಯದಲ್ಲಿ ಅರ್ಧ ಚಮಚೆ ಅಮೃತ ಸತ್ವ ಸೇರಿಸಿ ಚೆನ್ನಾಗಿ ಕರಗಿಸಿಟ್ಟುಕೊಂಡು ಪ್ರತಿ ಎರಡು ಗಂಟೆಗಳಿಗೊಮ್ಮೆ ನಾಲ್ಕು ಚಮಚೆ ಕುಡಿಯಬೇಕು.
* ಒಂದು ನಿಂಬೆಹಣ್ಣು, 1/2 ಚಮಚೆ ಜೀರಿಗೆ, 1 ಚಿಟಿಕೆ ಅಡುಗೆ ಸೋಡ ಎಲ್ಲವನ್ನು 1/4 ಲೀಟರ್ ನೀರಿನಲ್ಲಿ ಹಾಕಿ ಚೆನ್ನಾಗಿ ಕುದಿಸಿ 1/4 ಭಾಗಕ್ಕೆ ಇಳಿಸಿ, ದಿನಕ್ಕೆರಡು ಬಾರಿ ಒಂದು ಬಟ್ಟಲು ಕುಡಿಯಬೇಕು. ಮಕ್ಕಳಿಗೆ ಅರ್ಧ ಬಟ್ಟಲು ಕೊಡಬೇಕು.
* ತುಳಸಿ ರಸ ಮತ್ತು ಹಸಿ ಶುಂಠಿರಸ ಸಮಭಾಗ ಬಿಸಿ ಮಾಡಿ ನಾಲ್ಕು ಚಮಚೆಯಂತೆ ಎರಡು ಬಾರಿ ಸೇವಿಸಬೇಕು.
* ಲೋಳೆರಸದ ತಿರುಳನ್ನು ನಾಲ್ಕೈದು ಸಲ ತೊಳೆಯಬೇಕು. ಇದನ್ನು ಜೀರಿಗೆ ಮತ್ತು ಬೆಲ್ಲದ ಪುಡಿಯಲ್ಲಿ ಬೆರೆಸಿ ಖಾಲಿ ಹೊಟ್ಟೆಯಲ್ಲಿ ಸೇವಿಸಬೇಕು.
* ಒಂದು ಚಮಚೆ ಓಮದ ಕಾಳನ್ನು (ಅಜವಾನ) ಬಾಣಲೆಯಲ್ಲಿ ಹಾಕಿ ಹುರಿಯಬೇಕು. ನಂತರ ಇದಕ್ಕೆ ಒಂದು ಲೋಟ ನೀರು ಹಾಕಬೇಕು. ಹೊಟ್ಟೆನೋವು ಕಾಣಿಸಿದಾಗಲೆಲ್ಲ ಇದನ್ನು ತಯಾರಿಸಿ ಅರ್ಧಲೋಟ ಕುಡಿಯಬೇಕು. ಮಕ್ಕಳಿಗೆ ಎರಡರಿಂದ ಮೂರು ಚಮಚೆ ಕುಡಿಸಬೇಕು.



# ಕಪ್ಪು ರಂಧ್ರಗಳು

– ಜಿ.ಎಸ್. ನರಸಿಂಹಮೂರ್ತಿ
ಕಾರ್ಯದರ್ಶಿ, ಕನ್ನಡ ಗಣಕಪರಿಷತ್, ಬೆಂಗಳೂರು

ವಿಜ್ಞಾನ ವಿಶೇಷ

ಕಪ್ಪು ರಂಧ್ರಗಳು ಎಂದರೆ ಏನು? ಕಪ್ಪು ರಂಧ್ರಗಳು ಎನ್ನುವುದು ಈಗಾಗಲೇ ಅನೇಕ ವರ್ಷಗಳಿಂದ ವಿಜ್ಞಾನದಲ್ಲಿ ಚರ್ಚಿತವಾಗುತ್ತಿರುವ ವಿದ್ಯಮಾನ. ಇದು ವಾಸ್ತವವಾಗಿ ರಂಧ್ರಗಳಲ್ಲ. ಹಾಗೆಂದೇ ಇದನ್ನು ನಮ್ಮಲ್ಲಿ ಕೃಷ್ಣ ವಿವರಗಳೆಂದು ಕರೆದಿರುವುದೂ ಉಂಟು. ಕಪ್ಪುಕಾಯಗಳು, ಕಪ್ಪುಕುಳಿಗಳು ಎಂದೂ ಇವನ್ನು ನಮ್ಮ ಲೇಖಕರು ಕರೆದಿರುವುದುಂಟು. ವಾಸ್ತವವಾಗಿ ಇದು ಗುರುತ್ವಾಕರ್ಷಣೆಯ ಪ್ರಬಲ ಪ್ರಭಾವದಿಂದ ಬೆಳಕು ಕೂಡ ತಪ್ಪಿಸಿಕೊಳ್ಳಲು ಸಾಧ್ಯವಾಗದಿರುವ ವಾತಾವರಣವಿರುವ ವಿಶ್ವದ ಒಂದು ಸ್ಥಳ.

ನಕ್ಷತ್ರವೊಂದು ತನ್ನ ಅಂತಿಮ ಅವಸ್ಥೆಯನ್ನು ಮುಟ್ಟಿದಾಗ ತನ್ನ ಎಲ್ಲಾ ವಸ್ತುಗಳನ್ನೂ ಒಳಗೆ ಎಳೆದುಕೊಂಡು ಸಂಕುಚಿತವಾಗುತ್ತ ಹೋಗುತ್ತದೆ. ಆಗ ಆ ನಕ್ಷತ್ರದ ತೂಕ ನಮ್ಮ ಸೂರ್ಯನ ತೂಕಕ್ಕಿಂತ ಸುಮಾರು ಇಪ್ಪತ್ತು ಪಟ್ಟು ಹೆಚ್ಚಿದ್ದರೆ ಅದು ಒಂದು ಕಪ್ಪು ರಂಧ್ರವಾಗುವ ಸಾಧ್ಯತೆ ಇರುತ್ತದೆ. ಕಪ್ಪು ರಂಧ್ರದಿಂದ ಬೆಳಕು ಬರುವುದಿಲ್ಲ ಎಂದ ಮೇಲೆ ಅದನ್ನು ಪತ್ತೆ ಹಚ್ಚುವುದು ಹೇಗೆ? ಅದು ಸಾಧ್ಯ. ಏಕೆಂದರೆ ಅದು ಅಗಾಧವಾದ ದ್ರವ್ಯರಾಶಿಯನ್ನು ಹೊಂದಿರುತ್ತದೆ. ಈ ದ್ರವ್ಯರಾಶಿಯಿಂದ ಉಂಟಾಗುವ ಗುರುತ್ವಾಕರ್ಷಣೆಯ ಪರಿಣಾಮವಾಗಿ ಪಕ್ಕದಲ್ಲಿರುವ ನಕ್ಷತ್ರ ಮತ್ತೆ ನಕ್ಷತ್ರಪುಂಜಗಳು ಬೇರೆ ರೀತಿಯಲ್ಲಿ ಚಲನೆಯಲ್ಲಿ ತೊಡಗುತ್ತವೆ . ಈ ಚಲನೆಯ ವ್ಯತ್ಯಾಸವನ್ನು ಕಂಡು ಹಿಡಿಯಬಹುದಾಗಿದೆ. ಹಾಗೆಯೇ ಕಂಡುಹಿಡಿದ ಅಂಶಗಳು ಈ ಕಪ್ಪು ರಂಧ್ರದ ದ್ರವ್ಯರಾಶಿಯ ಪ್ರಮಾಣ ಮತ್ತು ಅದರ ಸಾಧ್ಯತೆಗಳನ್ನು ತಿಳಿಸಿಕೊಡಲು ಸಹಾಯವಾಗುತ್ತದೆ. ಹಾಗೆಯೇ ಈ ಕಪ್ಪುರಂಧ್ರಗಳು ನೆರೆಹೊರೆಯ ನಕ್ಷತ್ರ, ನಕ್ಷತ್ರಪುಂಜಗಳಿಂದ ವಸ್ತುವನ್ನು ತನ್ನೆಡೆಗೆ ಸೆಳುದುಕೊಳ್ಳುವುದನ್ನೂ ಕಂಡು ಹಿಡಿಯಬಹುದಾಗಿದೆ.



ಓರ್ವ ಕಲಾವಿದ ಚಿತ್ರಿಸಿರುವ ಸಿಗ್ನಸ್ ಎಂಬ ಕಪ್ಪು ರಂಧ್ರ, ಪಕ್ಕದಲ್ಲಿರುವ ನಕ್ಷತ್ರದಿಂದ ಅದರ ವಸ್ತುಗಳು ಕಪ್ಪು ರಂಧ್ರದೆಡೆಗೆ ಧಾವಿಸುತ್ತಿರುವುದನ್ನು ಇಲ್ಲಿ ನೋಡಬಹುದು.

ಕಪ್ಪುರಂಧ್ರದ ಸಮೀಪಕ್ಕೆ ಹೋದ ಎಲ್ಲ ವಸ್ತುಗಳನ್ನೂ ಅದರ ಗುರುತ್ವಾಕರ್ಷಣೆ ತನ್ನೆಡೆಗೆ ಸೆಳೆದುಕೊಂಡು ಬಿಡುತ್ತದೆ. ಯಾವ ದೂರದಲ್ಲಿ ಅದು ತನ್ನೆಡೆಗೆ ಸೆಳೆದುಕೊಳ್ಳುತ್ತದೋ ಆ ವಲಯವನ್ನು ವೆಂಟ್ ಹೊರೈಝನ್ ಎನ್ನುತ್ತಾರೆ. ಇದು ಕನ್ನಡದಲ್ಲಿ ಘಟನಾ ಹಾರಿಜ ಎಂದು ರೂಢಿಯಲ್ಲಿದೆ. ನಾವು ಬೇಕಾದರೆ ವೈತರಣೀ ಕ್ಷಿತಿಜ ಎಂದು ಕರೆಯಬಹುದು. ವೈತರಣೀ ನದಿಯನ್ನು ದಾಟದರೆ ಬದುಕಲು ಸಾಧ್ಯವಿಲ್ಲ ಎಂದು ನಮ್ಮ ಪುರಾಣ ಪರಂಪರೆಯಲ್ಲಿ ಉಲ್ಲೇಖವಾಗಿರುವ ಅಂಶ. ಸಾವಿತ್ರಿ ಒಬ್ಬಳು ಮಾತ್ರ ಯಮನನ್ನು ಹಿಂಬಾಲಿಸಿ ವೈತರಣೀ ನದಿಯನ್ನು ದಾಟಿ ಸತ್ಯವಾನನ ಪ್ರಾಣವನ್ನು ಉಳಿಸಿಕೊಂಡ ಕಥೆ ಗೊತ್ತಿರುವುದೇ ಅಲ್ಲವೆ? ಎಂದರೆ ಆ ಅಂಚನ್ನು ದಾಟಿದರೆ ಏನಾಗುವುದೋ ಯಾರಿಗೂ ತಿಳಿಯದು. ವಿಶ್ವದಲ್ಲಿ ಇಂತಹ ಕಪ್ಪು ರಂಧ್ರಗಳು ಎಷ್ಟಿವೆ? ಇವುಗಳ ಜೀವನಾವಧಿ ಎಷ್ಟು? ಇವುಗಳಿಂದ ಕಡೆಗೆ ವಿಶ್ವದ ಎಲ್ಲ ವಸ್ತುಗಳೂ ಕಪ್ಪುರಂಧ್ರಗಳಲ್ಲಿ ವಿಲೀನ ಹೊಂದಿ ಮಾಯವಾಗಿ ಬಿಡುತ್ತದೆಯೇ? ಕಪ್ಪುರಂಧ್ರಗಳಲ್ಲಿರುವ ವಸ್ತುಗಳು ಹೇಗಿರುತ್ತವೆ? ಅವು ಯಾವುದಾದರೂ ನಿಯಮಗಳನ್ನು ಪಾಲಿಸುತ್ತವೆಯೋ ? ಇಂತಹ ಯಾವ ಪ್ರಶ್ನೆಗೂ ಇನ್ನೂ ಉತ್ತರ ದೊರೆತಿಲ್ಲ. ಐನಸ್ಟೈನ್ ಕಂಡುಹಿಡಿದ ಸಾಮಾನ್ಯ ಸಾಪೇಕ್ಷತಾ ಸಿದ್ಧಾಂತದ ಹಿನ್ನೆಯಲ್ಲಿ ಕಪ್ಪುರಂಧ್ರಗಳ ವಿದ್ಯಮಾನ ನಮ್ಮ ಅರಿವಿಗೆ ಬಂದಿತು. ಏಕೆಂದರೆ ಬೆಳಕಿಗೆ ಬಂದಿತು ಎಂದು ಹೇಳಲಾಗುವುದಿಲ್ಲ ತಾನೇ? ಈ ದಿಕ್ಕಿನಲ್ಲಿ ಚಿಂತಿಸಲು, ಸಂಶೋಧಿಸಲು, ಕೆಲಸ ಮಾಡಲು ಮಿತಿಯೇ ಇಲ್ಲದ ಅವಕಾಶಗಳಿವೆ. ಕುತೂಹಲ ಮತ್ತು ಆ ಕಡೆಯ ಸೆಳೆತಗಳು ನಮ್ಮನ್ನು ಆ ದಿಕ್ಕಿಗೆ ಕರೆದುಕೊಂಡು ಹೋಗಬೇಕಾಗಿದೆ.

# ಅಜ್ಜಿಯ ಹೆಗಲ ಮೇಲೆ ಹೊರಟವನು

– ಚಳ್ಳಕೆರೆ ಯರ್ರಿಸ್ವಾಮಿ

ವನು ಅಜ್ಜಿಯ ಹೆಗಲಮೇಲೆ ಕುಳಿತು ಸಂತೆಗೆ ಬಂದಿದ್ದ. ಚಿಕ್ಕವಯಸ್ಸಿನಲ್ಲೇ ಅಪ್ಪ ಅಮ್ಮನನ್ನು ಕಳೆದುಕೊಂಡಿದ್ದ ಈ ಹುಡುಗನಿಗೆ ಅಜ್ಜಿಯೇ ಆಸರೆ. ಅವಳ ಪ್ರೀತಿಯ ಪುಟ್ಟ ಇವನು. ಅಜ್ಜಿ ಎಲ್ಲೆಲ್ಲಿ ಹೋಗುತ್ತಾಳೋ ಅಲ್ಲಿಗೆಲ್ಲಾ ಇವನನ್ನೂ ಕರೆದೊಯ್ಯಬೇಕು. ಅಂದು ಸಂತೆಯಲ್ಲಿ ಕಿಕ್ಕಿರಿದ ಜನಜಂಗುಳಿಯ ನಡುವೆ ಅಜ್ಜಿ ತನ್ನ ಪ್ರೀತಿಯ ಮೊಮ್ಮಗನಿಗೆ ಬೆಂಡುಬತ್ತಾಸು ಕೊಡಿಸಲು ಮಿಠಾಯಿ ಅಂಗಡಿಗೆ ಬಂದಳು. ಇವನು ಮಾತ್ರ ತಲೆಕೊಡವಿದ. ಮಿಠಾಯಿ ನನಗೆ ಬೇಡ ಅದರ ಬದಲಿಗೆ ನನಗೇನೋ ಬೇಕು ಎನ್ನುತ್ತಾ ದೂರದಂಗಡಿಯ ಕಡೆ ಬೆರಳುಮಾಡಿ ತೋರಿಸಿದ. ಅಜ್ಜಿ ಇಲ್ಲವೆಂದಾಳೆ... ಅದೇನು ಬಾ ತೋರಿಸು ಎನ್ನುತ್ತಾ ಅವನು ತೋರಿದ ಅಂಗಡಿಗೆ ಕರೆತಂದಳು. ಆ ಮುದುಕಿಗೆ ನಗು ಬಂತು. 'ಇದು ಹೆಣ್ಣುಮಕ್ಕಳ ಅಲಂಕಾರದ ಬಳೆ ಅಂಗಡಿಕಣೋ, ಇಲ್ಲೇನಿದೆ ನಿನ್ನಂತಹಾ ಹುಡುಗನಿಗೆ' ಅಂದಳು ಅಜ್ಜಿ. ಅವನಾಗಲೇ ತನ್ನನ್ನು ಆಕರ್ಷಿಸಿದ್ದ ವಸ್ತುವನ್ನು ಕೈಗೆತ್ತಿಕೊಂಡಿದ್ದ. ಲೋಕವನ್ನೇ ಮರೆತು ಖುಷಿಯಿಂದ ಬೆರಗು ಕಂಗಳರಳಿಸಿ ಅದನ್ನೇ ನೋಡುತ್ತಿದ್ದ.

ಅದೊಂದು ಗಾಜಿನ ತುಂಡು! ಅದನ್ನು ಪಟ್ಟಕ ಎನ್ನುತ್ತಿದ್ದರು. ಬೆಳಕಿಗಿಡಿದರೆ ತರಹೇವಾರಿ ಬಣ್ಣಗಳಿಂದ ಮಿಂಚುತ್ತಿದ್ದ ಅದು ಒಂದು ಮಕ್ಕಳಾಟಿಕೆಯಾಗಿತ್ತು. ಅಜ್ಜಿ ಸೊಂಟದ ಚೀಲದಿಂದ ಎರಡಾಣೆ ತೆಗೆದು ಅಂಗಡಿಯವನಿಗಿತ್ತಳು. ಈ ಪುಟ್ಟ ಜಗತ್ತನ್ನೇ ಗೆದ್ದವನಂತೆ ಕುಣಿದು ಕುಪ್ಪಳಿಸಿದ.



ವಿಜ್ಞಾನಿ 'ಐಸಾಕ್ ನ್ಯೂಟನ್'ನ ಎಳೆಯ ವಯಸ್ಸಿನ ಆ ದಿನಗಳಲ್ಲಿ ಹೀಗೆ ಅವನ ಅಜ್ಜಿ ಕೊಡಿಸಿದ ಆ ಗಾಜಿನ ತುಂಡಿನಿಂದಲೇ, ನ್ಯೂಟನ್ ವಿಶ್ವ ವಿಖ್ಯಾತ ವಿಜ್ಞಾನಿಯಾಗುವ ಸ್ಫೂರ್ತಿ ಪಡೆದಿದ್ದ. ಅದೇ ಪಟ್ಟಕದಿಂದ ಬಿಡುವು ಸಿಕ್ಕಾಗಲೆಲ್ಲಾ ಬೆಳಕಿನ ವರ್ಣವಿಭಜನೆಯ ಬಗ್ಗೆ ಪ್ರಯೋಗ ನಡೆಸುತ್ತಿದ್ದ. ಅಜ್ಜಿ ಕೊಡಿಸಿದ ಆ ಪುಟ್ಟ ಪಟ್ಟಕದಿಂದ ವಿಶ್ವದ ನಿಗೂಢಗಳನ್ನು ತಿಳಿಯುವ ಕುತೂಹಲವು ಎಷ್ಟರ ಮಟ್ಟಿಗೆ ನ್ಯೂಟನ್ನನಲ್ಲಿ ಅಂಕುರಿಸಿತೆಂದರೆ, ಶಾಲೆಕಲಿಯಲು ಅಜ್ಜಿಯಿಂದ ದೂರವಾಗಿ ದೂರದ ಊರಿನಲ್ಲಿ ತನ್ನ ಸಹಪಾಟಿಗಳ ತಟ್ಟೆ ತೊಳೆದು, ಬಟ್ಟೆ ಒಗೆದು, ಕೊಠಡಿಗಳನ್ನು ಸ್ವಚ್ಛಗೊಳಿಸಿ ಬಂದ ಕೂಲಿ ಹಣದಲ್ಲಿ ಶಾಲೆ ಫೀಸು ಕಟ್ಟುತ್ತಿದ್ದಾಗಲೂ ಯಾವುದೂ ಅವನಿಗೆ ಶ್ರಮವೆನಿಸುತ್ತಿರಲಿಲ್ಲ. ಅಜ್ಜಿ ಕೊಡಿಸಿದ ಪಟ್ಟಕ, ಅದರೊಟ್ಟಿಗಿನ ಅವನ ಪ್ರಯೋಗಗಳು ಅವನಲ್ಲಿ ಸದಾ ಖುಷಿತುಂಬುವಂತೆ ಮಾಡಿದ್ದವು. ದಿನಕಳೆದಂತೆ ನ್ಯೂಟನ್, ವಿಜ್ಞಾನಿಯಾಗಿ ಮನುಕುಲದ ಚಿಂತನೆಯ ಕ್ರಮವನ್ನೇ ಬದಲಿಸಿದ ಮಹಾ ಮೇಧಾವಿ ಎನಿಸಿಕೊಂಡ. ಅವನು ನಿರೂಪಿಸಿದ 'ಚಲನೆಯ ನಿಯಮಗಳು' ಹಾಗೂ 'ಗುರುತ್ವಾಕರ್ಷಣೆಯ ನಿಯಮಗಳು' ಅವನು ಆಗಿಹೋಗಿ ಇಂದಿಗೆ ಐದುನೂರು ವರ್ಷಗಳಾದರೂ ಇನ್ನೂ ಮಾಸಿಲ್ಲ. ಇಂದಿನ ಆಧುನಿಕ ಮನುಷ್ಯನ ಅಂತರಗ್ರಹ, ಉಪಗ್ರಹಗಳ ಖಗೋಳ ಪ್ರಯಾಣದ ಯಶಸ್ವಿ ಸಾಹಸಗಳಿಗೆ ನ್ಯೂಟನ್ನನ ನಿಯಮಗಳೇ ಆಧಾರವಾಗಿವೆ!

# ಆ ಚರ್ಮದ ದಾರ

(The Leather Thong - ತೊಗಲಿನ ಮಿಣಿ)

ಅಕ್ಟೋಬರ್ 13, 1899 ರಿಂದ 1900ರ ಮೇ 17ರ ತನಕ ಅಂದರೆ 218 ದಿನ ಮೆಫಕಿಂಗ್ ಗೆ ಬೋಯರ್‌ಗಳ (ದಕ್ಷಿಣ ಆಫ್ರಿಕಾದಲ್ಲಿ ನೆಲೆಸಿದ್ದ ಡಚ್ಚರು) ದಿಗ್ಬಂಧನಕ್ಕೆ ಒಳಗಾಗಿದ್ದ ಬ್ರಿಟಿಷ್ ಸೇನೆಯ ನಾಯಕ ಬೇಡನ್ ಪೊವೆಲ್ ತನ್ನ ತುಕಡಿಯ ರಕ್ಷಣೆಗೆ ಕಷ್ಟ ಪಡುತ್ತಿದ್ದರು.

ಒಂದು ಮುಂಜಾನೆ ಇಡೀ ಪ್ರದೇಶದ ರಕ್ಷಣಾ ವ್ಯವಸ್ಥೆಯನ್ನು ಪರಿಶೀಲಿಸಿ ಹಿಂದಿರುಗುತ್ತಿದ್ದರು. ದೀರ್ಘಕಾಲ ದಿಗ್ಬಂಧನಕ್ಕೊಳಗೊಂಡ ಮೆಫೆಕಿಂಗನ್ನು ರಕ್ಷಿಸಲು ಹರಸಾಹಸ ಮಾಡುತ್ತಾ ತನ್ನ ಬುದ್ಧಿವಂತಿಕೆಯನ್ನೆಲ್ಲಾ ಉಪಯೋಗಿಸಿ ಸೋತು ಹೋಗಿದ್ದ ಬಿಪಿ ಒಂದು ರೀತಿಯ ಖಿನ್ನತೆಗೆ ಒಳಗಾಗಿದ್ದರು. ಎದುರಿಗೆ ಬಂದ ಸಫಾಯಿ ಕರ್ಮಚಾರಿಯಾಗಿ ಕೆಲಸ ಮಾಡುತ್ತಿದ್ದ ಒಬ್ಬ ಕರಿಯ ವೃದ್ಧನು ಬೇಡನ್ ಪೋವಲ್ ರ ಮುಖ ನೋಡಿ, "ಯಾಕೆ ನೀನು ಎಂದಿನಂತೆ ಶಿಳ್ಳೆ ಹಾಕುತ್ತಿಲ್ಲ?" ಎಂದು ಪ್ರಶ್ನಿಸಿದ. ಬಿ.ಪಿ. "ಯಾಕೋ ಬೇಜಾರಾಗಿದೆ, ಮನಸ್ಸಿಗೆ ಸರಿಯಿಲ್ಲ" ಎಂದರು. ಕೂಡಲೇ ಆ ವೃದ್ಧ ಕಾರ್ಮಿಕ ತನ್ನ ಕತ್ತಿನಲ್ಲಿ ಹಾಕಿಕೊಂಡಿದ್ದ ಚರ್ಮದ ದಾರವನ್ನು ತೆಗೆದು ಬಿ.ಪಿ.ಗೆ ಕೊಡುತ್ತಾ "ಇದು ನನ್ನ ತಾಯಿ ಅದೃಷ್ಟ ತರುತ್ತದೆಯೆಂದು ನನಗೆ ಕೊಟ್ಟಿದ್ದಳು. ನೀನು ಧರಿಸು ಒಳ್ಳೆಯದಾಗುತ್ತದೆ." ಎಂದನು. ಅದನ್ನು ಸ್ವೀಕರಿಸಿ, ಅವನಿಗೆ ಕೃತಜ್ಞತೆ ಹೇಳಿ, ಆ ಚರ್ಮದ ದಾರವನ್ನು ತಮ್ಮ ಜೇಬಿನಲ್ಲಿ ಹಾಕಿಕೊಂಡು ಮುಂದೆ ನಡೆದರು. ಅವರ ಮುಖದಲ್ಲೊಂದು ಕಿರುನಗೆ ಮೂಡಿತು.

ಅದೃಷ್ಟವಶಾತ್, ಕಾಕತಾಳೀಯವೋ ಎಂಬಂತೆ, ಅಂದೇ ತಮ್ಮ ಸಹಾಯಕ್ಕಾಗಿ ಹೆಚ್ಚುವರಿ ಬ್ರಿಟಿಷ್ ಸೈನ್ಯ ಬರುತ್ತಿದೆ ಎನ್ನುವ ಶುಭ ಸಮಾಚಾರ ಬಂದಿತು! ಬಂದ ಸೈನ್ಯದ ಸಹಾಯದಿಂದ ಮೆಫೆಕಿಂಗ್ ಬಿಡುಗಡೆಯಾಯಿತು.

ಮೊದಲ ವುಡ್ ಬ್ಯಾಡ್ಜ್ ತರಬೇತಿ ನಡೆದಾಗ, ಈ ಹಿಂದೆ ಜೂಲೋ ಪಂಗಡದ ಮುಖ್ಯಸ್ಥ ಡಿನಿ ಜೂಲೋನಿಂದ ವಶಪಡಿಸಿಕೊಂಡಿದ್ದ ಸರದ ಎರಡು ಮಣಿಗಳನ್ನು ತೆಗೆದು ಮೇಲ್ಕಂಡ ಚರ್ಮದ ದಾರದ ಸಂಕೇತವಾಗಿ ಒಂದು ಮಿಣಿಯಲ್ಲಿ ಪೋಣಿಸಿ ನೀಡಲಾಯಿತು.

(ಬಿ.ಪಿ.ಯವರ ಜೀವನ ಚರಿತ್ರೆಯಿಂದ ಆಯ್ದಭಾಗ)

## ಸ್ಕೌಟ್ಸ್ ಮತ್ತು ಗೈಡ್ಸ್ ರಸಪ್ರಶ್ನೆ - 04

– ಎಂ.ಎನ್ ಷಡಕ್ಷರಿ
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

1. ಹ್ಯಾಮ್ ರೇಡಿಯೋ ದಲ್ಲಿ HAM ಅನ್ನು ವಿಸ್ತರಿಸಿ
2. ಭಾರತ್ ಸ್ಕೌಟ್ಸ್-ಗೈಡ್ಸ್ ನ ರಾಷ್ಟ್ರೀಯ ಸಂಸ್ಥೆಯ ಮೊದಲ ಮುಖ್ಯ ಆಯುಕ್ತರು ಯಾರು ?
3. ಅಮೆರಿಕಾಗೆ ಸ್ಕೌಟ್ ಚಳುವಳಿಯನ್ನು ತಂದ ಶ್ರೀಮಂತ ಯಾತ್ರಿಕ ಯಾರು?
4. ಸ್ಕೌಟ್ ಸಂಸ್ಥೆಯ ಸೇವೆಯನ್ನು ಗಮನಿಸಿ ವಿಶ್ವಸಂಸ್ಥೆಯು ಯಾವ ಪಾರಿತೋಷಕವನ್ನು ನೀಡಿ ಗೌರವಿಸಿದೆ?
5. ಬಿ.ಪಿ.ಯವರ ಪ್ರಕಾರ, ಖಾಯಿಲೆಗಳನ್ನು ದೂರವಿಡಲು ಬೇಕಾದ ಎರಡು ಮುಖ್ಯ ಅಂಶಗಳು ಯಾವುವು?
6. ಬೆಂಕಿ ಆಕಸ್ಮಿಕದ ಸಮಯದಲ್ಲಿ ಅಗ್ನಿಶಾಮಕ ದಳದವರು ಬಂದಮೇಲೆ ಸ್ಕೌಟ್‌ಗಳ ಮುಖ್ಯ ಕೆಲಸವೇನು?
7. ಮೆಫೆಕಿಂಗ್ ದಿಗ್ಬಂಧನದ ಸಮಯದಲ್ಲಿ ಬಿ.ಪಿ. ತಮ್ಮದೇ ಅಂಚೆಚೀಟಿ ಮುದ್ರಿಸಿದ್ದರು. ಆ ಅಂಚೇಚೀಟಿಯಲ್ಲಿ ಏನು ಚಿತ್ರವಿತ್ತು?
8. ಟೋಪೋಗ್ರಾಫಿಕಲ್ ಮ್ಯಾಪ್‌ನಲ್ಲಿ ಭೂಮಿಯ ಮೇಲ್ಮೆಯ ಒಂದೇ ಎತ್ತರವನ್ನು ಸೂಚಿಸುವ ಕಂದು ಬಣ್ಣದ ರೇಖೆಗಳಿಗೆ ಏನೆಂದು ಕರೆಯಲಾಗುತ್ತದೆ?
9. ಪ್ರಥಮ ಚಿಕಿತ್ಸೆಯಲ್ಲಿ "ಹಿಮ್‌ಲಿಚ್ ವಿಧಾನ"ವನ್ನು ಯಾವ ಸಮಯದಲ್ಲಿ ಉಪಯೋಗಿಸಲಾಗುವುದು?
10. ಸ್ಕೌಟ್-ಗೈಡ್ ಪ್ರಾರ್ಥನೆಯನ್ನು ರಚಿಸಿದವರು ಯಾರು?

ವಿ.ಸೂ.: ಸರಿಯಾದ ಉತ್ತರಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.
ಉತ್ತರ ಕೊಟ್ಟವರ ಹೆಸರುಗಳನ್ನು ಪ್ರಕಟಿಸಲಾಗುವುದು.

### ಸ್ಕೌಟ್ ಮತ್ತು ಗೈಡ್ಸ್ ರಸಪ್ರಶ್ನೆ - 03 ಉತ್ತರಗಳು

1. ಆ ದೊಡ್ಡ ಹ್ಯಾಟಿನವ  2. ಟೂರ್ನಿಕೇ  3. ರಾಬರ್ಟ್ ಹಿಂಡ್ ಮಾರ್ಷ್
4. ದೇವರಲ್ಲಿ ನಂಬಿಕೆ, ದೇಶಸೇವೆ ಮತ್ತು ಇತರರಿಗೆ ಸಹಾಯ (ಈ ಅಂಶಗಳು ಪ್ರತಿಜ್ಞೆಯಲ್ಲಿ ಬಂದಿವೆ)
5. ಬಲಗಡೆ  6. 2007  7. ಸರ್. ವಿಲಿಯಂ ಸ್ಮಿತ್  8. 202.50
9. ಕೋಸ್ಟರಿಕಾ  10. ಒಂದು ರೆಡ್ ಇಂಡಿಯನ್ ಬಿಡಾರ

# ಜುಲೈ ತಿಂಗಳ ಕಾರ್ಯಕ್ರಮಗಳು

ಧ್ಯೇಯ ವಾಕ್ಯ:
ಮುಂಗಾರು ತುಂತುರು ಉಳಿಸಿ

## ಸ್ಥಳೀಯ ಮತ್ತು ಜಿಲ್ಲಾ ಸಂಸ್ಥೆಯ ಕಾರ್ಯಕ್ರಮಗಳು

| ಕ್ರ.ಸಂ. | ಕಾರ್ಯಕ್ರಮದ ಹೆಸರು | ಇಂದ | ಗೆ | ಸ್ಥಳ | ದಿನಗಳು |
|---|---|---|---|---|---|
| 1. | ಕಬ್ಸ್-ಬುಲ್‌ಬುಲ್ಸ್‌ಗಳಿಗೆ ದೇಶಭಕ್ತಿ ಗೀತಗಾಯನ ಸ್ಪರ್ಧೆ | ಜುಲೈ 2019 | | ಎಲ್ಲಾ ಸ್ಥಳೀಯ ಮತ್ತು ಜಿಲ್ಲಾ ಮಟ್ಟಗಳಲ್ಲಿ | 1 |
| | ಸ್ಕೌಟ್ಸ್-ಗೈಡ್ಸ್‌ಗಳಿಗೆ ದೇಶಭಕ್ತಿ ಗೀತಗಾಯನ ಸ್ಪರ್ಧೆ | ಜುಲೈ 2019 | | ಎಲ್ಲಾ ಸ್ಥಳೀಯ ಮತ್ತು ಜಿಲ್ಲಾ ಮಟ್ಟಗಳಲ್ಲಿ | 1 |
| | ರೋವರ್ಸ್-ರೇಂಜರ್ಸ್‌ಗಳಿಗೆ ಸಂಗೀತ ವಾದ್ಯಗಳ ಸ್ಪರ್ಧೆ | ಜುಲೈ 2019 | | ಜಿಲ್ಲಾ ಮಟ್ಟದಲ್ಲಿ | 1 |
| 2. | ಜಿಲ್ಲಾ ಸಂಸ್ಥೆಯ ಮಹಾಸಭೆ | ಜುಲೈ 2019 | | ಜಿಲ್ಲಾ ಮಟ್ಟದಲ್ಲಿ | 1 |
| 3. | ಸ್ಕೌಟರ್-ಗೈಡರ್ ಸಮಾವೇಶ ಮತ್ತು ಪುನಶ್ಚೇತನ ತರಬೇತಿ ಶಿಬಿರ | ಜುಲೈ 2019 | | ಸ್ಥಳೀಯ & ಜಿಲ್ಲಾ ಮಟ್ಟದಲ್ಲಿ | 1 |
| 4. | ರೇಂಜರ್ ಶತಮಾನೋತ್ಸವ (ಪ್ರೇರಣಾ ಶಿಬಿರ) | ಜುಲೈ 2019 | | ಸ್ಥಳೀಯ & ಜಿಲ್ಲಾ ಮಟ್ಟದಲ್ಲಿ | 3 |
| 5. | ಕೃಷಿ ತರಬೇತಿ ಶಿಬಿರ ಜಿಲ್ಲೆ / ತಾಲ್ಲೂಕಿನ ವಿಶೇಷ ಕಾರ್ಯಕ್ರಮಗಳು | ಜುಲೈ/ ಸೆಪ್ಟೆಂಬರ್ 2019 | | ಸ್ಥಳೀಯ & ಜಿಲ್ಲಾ ಮಟ್ಟದಲ್ಲಿ | 3 |
| 6. | ಸ್ಕೌಟ್ಸ್ ಮತ್ತು ಗೈಡ್ಸ್ ಪದಕ ತರಬೇತಿ ಶಿಬಿರ | ಜುಲೈ 2019 | | ಸ್ಥಳೀಯ & ಜಿಲ್ಲಾ ಮಟ್ಟದಲ್ಲಿ | 3 |
| 7. | ಪದಕ ಬೋಧಕರ / ಪರೀಕ್ಷಕರ ಸಮಾವೇಶ | ಜುಲೈ 2019 | | ಜಿಲ್ಲಾ ಮಟ್ಟದಲ್ಲಿ | 3 |
| 8. | ಸ್ವಚ್ಛತಾ ಕಾರ್ಯಕ್ರಮ | ಜುಲೈ 2019 | | ಸ್ಥಳೀಯ & ಜಿಲ್ಲಾ ಮಟ್ಟದಲ್ಲಿ | 1 |
| 9. | ಚತುರ್ಥ ಚರಣ್ ಮತ್ತು ಹೀರಖ್ ಪಂಕ್ ಪರೀಕ್ಷಾ ಶಿಬಿರ | ಜುಲೈ/ ಆಗಸ್ಟ್ 2019 | | ಸ್ಥಳೀಯ & ಜಿಲ್ಲಾ ಮಟ್ಟದಲ್ಲಿ | 3 |
| 10. | ಕಬ್ಸ್-ಬುಲ್‌ಬುಲ್ಸ್‌ಗಳಿಗೆ ಜಿಲ್ಲಾ ಮಟ್ಟದ ಪದಕ ಶಿಬಿರ | ಜುಲೈ 2019 | | ಎಲ್ಲಾ ಜಿಲ್ಲಾ ಮಟ್ಟದಲ್ಲಿ | 3 |
| 11. | ಕೃಷಿಯೆಡೆಗೆ ಸ್ಕೌಟ್/ಗೈಡ್‌ಗಳ ನಡಿಗೆ | ಜುಲೈ 2019 | | ಸ್ಥಳೀಯ ಮಟ್ಟದಲ್ಲಿ | 1 |

| ರಾಜ್ಯ ಸಂಸ್ಥೆಯ ಬಾಲಕರ ಮತ್ತು ಬಾಲಕಿಯರ ಕಾರ್ಯಕ್ರಮಗಳು | | | | |
|---|---|---|---|---|
| 1. | ರಾಜ್ಯಪುರಸ್ಕಾರ ರ‍್ಯಾಲಿ | ಜುಲೈ 2019 | ಶಾಂತಿಗೃಹ/ ರಾಜಭವನ ಬೆಂಗಳೂರು | 2 |
| 2. | ರಾಜ್ಯ ಮಟ್ಟದ ರೋವರ್ಸ್-ರೇಂಜರ್ಸ್‌ಗಳಿಗೆ ರಾಜ್ಯಪುರಸ್ಕಾರ ಕೊಂಡಜ್ಜಿ/ದೊಡ್ಡಬಳ್ಳಾಪುರ ಪರೀಕ್ಷಾ ಶಿಬಿರ | 23.07.2019–27.07.2019 | ರಾಜ್ಯ ತರಬೇತಿ ಕೇಂದ್ರ | 5 |
| 3. | ರೇಂಜರಿಂಗ್ ಶತಮಾನೋತ್ಸವ ಸಮಾರಂಭ | ಜುಲೈ/ ಆಗಸ್ಟ್ 2019 | ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ ವಿಜಯಪುರ | 1 |
| 4. | ಸ್ಕೌಟ್ಸ್ ಮತ್ತು ಗೈಡ್ಸ್ ಅಗ್ರಗಾಮಿತ್ವ ಶಿಬಿರಗಳು (8 ಸ್ಥಳಗಳಲ್ಲಿ) | ಜುಲೈ 2019 | ಜಿಲ್ಲಾ ತರಬೇತಿ ಕೇಂದ್ರಗಳಲ್ಲಿ ವಿಜಯಪುರ / ಕೊಪ್ಪಳ ಬಾಗಲಕೋಟೆ/ಧಾರವಾಡ ದಕ್ಷಿಣ ಕನ್ನಡ / ಉಡುಪಿ | 5 |
| 5. | ಕಬ್ ಮಾಸ್ಟರ್ಸ್/ಫ್ಲಾಕ್ ಲೀಡರ್ಸ್ ಮುಂದುವರೆದ ತರಬೇತಿ ಕೊಂಡಜ್ಜಿ/ದೊಡ್ಡಬಳ್ಳಾಪುರ | ಜುಲೈ 2019 | ರಾಜ್ಯ ಕೇಂದ್ರ ಕಛೇರಿ | 7 |
| 6. | ಪದವಿ ಪೂರ್ವ ಕಾಲೇಜುಗಳ ಡಿಡಿಪಿಯು, ಪ್ರಾಂಶುಪಾಲರು/ ನೋಡಲ್ ಅಧಿಕಾರಿ/ ಸಂಯೋಜಕರುಗಳಿಗೆ ಒಂದು ದಿನದ ಮಾಹಿತಿ ಶಿಬಿರ | ನಿಗದಿಪಡಿಸಲಾಗುವುದು | | 1 |
| 7. | ರೋವರ್ಸ್-ರೇಂಜರ್ಸ್‌ಗಳಿಗೆ ಭಾರತ ದರ್ಶನ | ಜುಲೈ 2019 | ರಾಜ್ಯ ಮಟ್ಟದಲ್ಲಿ | 10 |
| 8. | ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ಸ್‌ಗಳಿಗೆ ವಿಭಾಗೀಯ ಮಟ್ಟದ ಮುಂದುವರೆದ ತರಬೇತಿ | ಜುಲೈ ಆಗಸ್ಟ್ 2019 | ಕಲಬುರ್ಗಿ & ಬೆಳಗಾವಿ ಮೈಸೂರು & ಬೆಂಗಳೂರು ವಿಭಾಗ | 7 |
| ರಾಷ್ಟ್ರೀಯ ತರಬೇತಿ ಕೇಂದ್ರ / ರಾಷ್ಟ್ರೀಯ ಸಾಹಸ ಸಂಸ್ಥೆ, ಪಚಮರಿ, ಮಧ್ಯಪ್ರದೇಶ | | | | |
| 1. | ಪ್ರಿ-ಎಎಲ್‌ಟಿ ತರಬೇತಿ | ಜುಲೈ/ ಆಗಸ್ಟ್ 2019 | ರಾಜ್ಯದ ಆದ್ಯತೆ ಮೇರೆಗೆ | 5 |
| 2. | ಪುನಶ್ಚೇತನ ತರಬೇತಿ ಶಿಬಿರ | ಜುಲೈ/ ಆಗಸ್ಟ್ 2019 | ರಾಜ್ಯದ ಆದ್ಯತೆ ಮೇರೆಗೆ | 5 |

ನನ್ನ ದೃಷ್ಟಿಯಲ್ಲಿ
ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಅತ್ಯುತ್ತಮ ಆಸ್ತಿ.
ಅವರು ಹೆಚ್ಚು ವಿಕಾಸಗೊಂಡಷ್ಟೂ ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.

– ಜವಾಹರಲಾಲ್ ನೆಹರು





# ಬಡವರ ಸೇವೆಯೇ ಧ್ಯೇಯವಾಗಲಿ

## ಭಾರತ್ ಸ್ಕೌಟ್ಸ್,ಗೈಡ್ಸ್ ಕಾರ್ಯಕ್ರಮದಲ್ಲಿ ವಿ.ಆರ್.ವಾಲಾ ಅಭಿಮತ

**ಬೆಂಗಳೂರು:** ಬಡವರು, ರೋಗಿಗಳು, ಅನಾಥರು, ಗ್ರಾಮೀಣ ಪ್ರದೇಶದವರು ಮತ್ತು ವೃದ್ಧರ ಸೇವೆಗೆ ಶ್ರಮಿಸುವುದೇ ಸ್ಕೌಟ್ಸ್ ಮತ್ತು ಗೈಡ್ಸ್ ಸ್ವಯಂ ಸೇವಕರ ಧ್ಯೇಯವಾಗಿರಬೇಕು ಎಂದು ರಾಜ್ಯಪಾಲ ವಿ.ಆರ್.ವಾಲಾ ಸಲಹೆ ನೀಡಿದರು.

ರಾಜಭವನದಲ್ಲಿ ಮಂಗಳವಾರ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಕಬ್ಸ್, ಬುಲ್ ಬುಲ್ಸ್, ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ಚತುರ್ಥ ಚರಣ್, ಹೀರಕ್ ಪಂಕ್ ಮತ್ತು ರಾಜ್ಯ ಪುರಸ್ಕಾರ ಪ್ರಮಾಣ ಪತ್ರ ವಿತರಣೆ ಮಾಡಿದರು.

ಸ್ಕೌಟ್ಸ್ ಮತ್ತು ಗೈಡ್ಸ್ ಸ್ವಯಂ ಸೇವಕರಿಗೆ ಸೇವೆಯೇ ಪರಮ ಧ್ಯೇಯವಾಗಬೇಕು. ಕರ್ನಾಟಕ, ಭಾರತವಷ್ಟೇ ಅಲ್ಲದೆ ಇಡೀ ವಿಶ್ವದ ಜನರು ತಮ್ಮವರು ಎಂಬ ಭಾವನೆ ಹೊಂದಬೇಕು. ಕೆಟ್ಟ ವಿಚಾರಗಳತ್ತ ಗಮನ ಹರಿಸದೆ, ಸಮಾಜಮುಖಿ ಚಿಂತನೆಗಳೊಂದಿಗೆ ಮುಂದೆ ಸಾಗಬೇಕು ಎಂದು ಕರೆ ಕೊಟ್ಟರು.

ರಾಷ್ಟ್ರ ಮತ್ತು ಸಮಾಜ ಸೇವೆಗೆ ಅರ್ಪಣೆ ಮಾಡಿಕೊಂಡಾಗ ಪ್ರತಿಯೊಬ್ಬರೂ ಸುಖ ಹಾಗೂ ಸಂತೋಷದಿಂದ ಇರಲು ಸಾಧ್ಯ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಾಲಾ ಹಂತದಿಂದಲೇ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯ ಭಾವನೆ ಮೂಡಿಸುತ್ತಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಅತ್ಯಂತ ಹಳೆಯ ಹಾಗೂ ವಿಶ್ವದ ಅತಿದೊಡ್ಡ ಸಂಘಟನೆಯಾಗಿದೆ. 218 ರಾಷ್ಟ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿದೆ. ವಿದ್ಯಾರ್ಥಿಗಳು ಶಿಕ್ಷಣದ ಜತೆಗೆ ಸೇವಾ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಹೋಗಬೇಕು ಎಂದರು.

ಉನ್ನತ ಶಿಕ್ಷಣ ಸಚಿವ ಜಿ.ಟಿ.ದೇವೇಗೌಡ ಮಾತನಾಡಿ, ರಾಜ್ಯದಲ್ಲಿ ಕಾಲೇಜು ಶಿಕ್ಷಣ ಇಲಾಖೆ ...

### 466 ಮಂದಿಗೆ ಪ್ರಮಾಣ ಪತ್ರ

ಚತುರ್ಥಚರಣ ಕಬ್ಸ್ ಪುರಸ್ಕಾರಕ್ಕೆ 898 ಮಂದಿ, ಹೀರಕ್ ಪಂಕ್ ಬುಲ್‌ಬುಲ್ಸ್ ಪುರಸ್ಕಾರಕ್ಕೆ 896, ರಾಜ್ಯ ಪುರಸ್ಕಾರ ಸ್ಕೌಟ್ಸ್‌ಗೆ 1,370, ರಾಜ್ಯ ಪುರಸ್ಕಾರ ಗೈಡ್ಸ್‌ಗೆ 1,191, ರಾಜ್ಯ ಪುರಸ್ಕಾರ ರೋವರ್ಸ್‌ಗೆ 122 ಮತ್ತು ರಾಜ್ಯ ಪುರಸ್ಕಾರ ರೇಂಜರ್ಸ್‌ಗೆ 136 ಮಂದಿ ಸೇರಿದಂತೆ ಒಟ್ಟು 4,613 ಮಂದಿಗೆ ಪ್ರಶಸ್ತಿ ಲಭಿಸಿದೆ. ಒಟ್ಟು 466 ಮಂದಿಗೆ ಪ್ರಮಾಣ ಪತ್ರಗಳನ್ನು ಪ್ರದಾನ ಮಾಡಲಾಯಿತು.

> ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಲ್ಲಿ ಯೋಗ, ಧ್ಯಾನ, ಕೌಶಲ್ಯ ಅಭಿವೃದ್ಧಿ, ಎನ್‌ಸಿಸಿ, ಎನ್‌ಎಸ್‌ಎಸ್ ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್ ಕಡ್ಡಾಯಗೊಳಿಸಲು ಚಿಂತನೆ ನಡೆಸಲಾಗಿದೆ. ಇದರಿಂದ ವಿದ್ಯಾರ್ಥಿಗಳ ಸರ್ವತೋಮುಖ ಅಭಿವೃದ್ಧಿಗೆ ಅನುಕೂಲವಾಗಲಿದೆ.
>
> • ಜಿ.ಟಿ.ದೇವೇಗೌಡ, ಉನ್ನತ ಶಿಕ್ಷಣ ಸಚಿವ

ಹೆಚ್ಚು ನೆರವಾಗಿದೆ ಎಂದು ಹೇಳಿದರು.

ಸ್ಕೌಟ್ಸ್ ಅಂಡ್ ಗೈಡ್ಸ್ ರಾಜ್ಯ ಮುಖ್ಯ ಆಯುಕ್ತ ಪಿ.ಜಿ.ಆರ್.ಸಿಂಧ್ಯಾ ಮಾತನಾಡಿ, ವಿಶ್ವ ಪರಿಸರ ದಿನಂಗವಾಗಿ ರಾಜ್ಯಾದ್ಯಂತ ನಮ್ಮ ಸ್ವಯಂ ಸೇವಕ ಸುಮಾರು ...

... ಭಾರತಿ ಚಂದ್ರಶೇಖರ್ ಮತ್ತ... ಎಂ.ಎ.ಖಾಲಿದ್ ಉ...

# ರಾಷ್ಟ್ರಕ್ಕಾಗಿ ಪ್ರಾಣವನ್ನ... ಪಣಕ್ಕಿಡೋಣ: ವಾಲಾ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ರಾಷ್ಟ್ರಕ್ಕಾಗಿ ದುಡಿಯೋಣ, ರಾಷ್ಟ್ರಕ್ಕಾಗಿ ಬದುಕೋ... ರಾಷ್ಟ್ರಕ್ಕಾಗಿ ಪ್ರಾಣತ್ಯಾಗ ಮಾಡಿ ಎಲ್ಲರ... ರಾಷ್ಟ್ರೀಯ ಭಾವನೆ ಮೂಡಿಸುವ ಕಾರ್ಯ... ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಯಶಸ್ವಿ... ನಿರ್ವಹಿಸುತ್ತಿದೆ ಎಂದು ರಾಜ್ಯಪಾಲ ವಜುಭಾ... ವಾಲಾ ಹೇಳಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಘ... ರಾಜಭವನದ ಗಾಜಿನ ಮನೆಯಲ್ಲಿ ಹಮ್ಮಿಕೊಂ... ಕಬ್ಸ್, ಬುಲ್ ಬುಲ್, ಸ್ಕೌಟ್ಸ್, ಗೈಡ್ಸ್, ರೋವ... ಮತ್ತು ರೇಂಜರ್‌ಗಳಿಗೆ ಚತುರ್ಥ ಚರಣ್, ಹೀ... ಪಂಕ್ ಹಾಗೂ ರಾಜ್ಯ ಪುರಸ್ಕಾರ ಪ್ರಮಾಣ ಪತ್ರ... ಪ್ರದಾನ ಮಾಡಿ ಅವರು ಮಾತನಾಡಿದರು.

ವಿದ್ಯಾರ್ಥಿಗಳು ಬಡವರು, ನೊಂದವರು ಹಾ... ರೋಗಿಗಳ ಸೇವೆಯಲ್ಲಿ ತೊಡಗಿಕೊಳ್ಳುವ ಮೂ... ಸಮಾಜ ಸೇವೆಯಲ್ಲಿ ಪಾಲ್ಗೊಳ್ಳಬೇಕು ಎಂದು ಹೇ... ದರು. ಉನ್ನತ ಶಿಕ್ಷಣ ಸಚಿವ ಜಿ.ಟಿ.ದೇವೇಗೌಡ, ಭಾ... ರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯು... ಪಿ.ಜಿ.ಆರ್.ಸಿಂಧ್ಯ, ಉಪಾಧ್ಯಕ್ಷ ತೇಜಸ್ವಿನಿ ಅನಂ... ಕುಮಾರ್, ರಾಜ್ಯ ಆಯುಕ್ತ ಎಂ.ಎ. ಖಾಲಿದ... ಕೊಂಡಜ್ಜಿ ಬಿ. ಷಣ್ಮುಕಪ್ಪ ಇತರರು ಉಪಸ್ಥಿತರಿದ್ದರು.

# ಸಮಾಜ ಸೇವೆಯಲ್ಲಿ ತೊಡಗಲು ಯುವಕರಿಗೆ ವಜುಬಾಯಿ ಕರೆ

ಬೆಂಗಳೂರು,ಜೂ.25– ಸಮಾಜದಲ್ಲಿ ನೊಂದವರು,ಬಡವರು ಹಾಗೂ ರೋಗಿಗಳ ಸೇವೆ ಮಾಡುವ ಮೂಲಕ ಸಮಾಜ ಸೇವೆಯಲ್ಲಿ ತೊಡಗಿಸಿಕೊಳ್ಳುವಂತೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳಿಗೆ ರಾಜ್ಯಪಾಲ ವಜುಬಾಯಿ ರೂಢವಾಲಾ ಅವರು ಕರೆನೀಡಿದ್ದಾರೆ.

ರಾಜಭವನದ ಗಾಜಿನ ಮನೆ ಆವರಣದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಆಯೋಜಿಸಿದ್ದ ಸಮಾರಂಭದಲ್ಲಿ ಕಬ್ಸ್ ಬುಲ್ ಬುಲ್ಸ್ ಸ್ಕೌಟ್ಸ್ ಗೈಡ್ಸ್ ರೋವರ್ ಮತ್ತು ರೇಂಜರ್ಸ್‌ಗಳಿಗೆ ಚತುರ್ಥ ಚರಣ್ ಹೀರಕ್ ಪಂಕ್ ಮತ್ತು ರಾಜ್ಯ ಪುರಸ್ಕಾರ ಪ್ರಮಾಣ ಪತ್ರಗಳನ್ನು ಪ್ರದಾನ ಮಾಡಿ ಮಾತನಾಡಿದರು.

ಯುವಜನರು ಕೆಟ್ಟವಿಚಾರಗಳತ್ತ ಗಮನ ಹರಿಸಬಾರದು. ಅದರ ಬಗ್ಗೆ ತಲೆಕೆಡಿಸಿಕೊಳ್ಳದೆ, ಸಮಾಜಮುಖಿ ಸೇವೆಗಳತ್ತ ಒಲವು ಬೆಳೆಸಿಕೊಳ್ಳುವಂತೆ ತಿಳಿಸಿದರು.

ಸಮಾಜದ ಆಗುಹೋಗುಗಳತ್ತ ಹೆಚ್ಚಿನ ಗಮನ ನೀಡಬೇಕು. ಕೇವಲ ರಾಜ್ಯ ಮಾತ್ರವಲ್ಲದೆ, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲೂ ಸೇವೆ ಸಲ್ಲಿಸುವಂತಹ ಮನೋಭಾವ ಬೆಳೆಸಿಕೊಳ್ಳುವಂತೆ ರಾಜ್ಯಪಾಲರು,ಯುವ ಸಮುದಾಯಕ್ಕೆ ಕರೆನೀಡಿದರು.

ಉನ್ನತ ಶಿಕ್ಷಣ ಸಚಿವ ಹಾಗೂ ಭಾರತ್ ಮತ್ತು ಸ್ಕೌಟ್ಸ್ ಉಪಾಧ್ಯಕ್ಷ ಜಿ.ಟಿ.ದೇವೇಗೌಡ ಅವರು ಮಾತನಾಡಿ, ರಾಜ್ಯದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಾಖೆಗೆ ಸರ್ಕಾರದಿಂದ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಒದಗಿಸಿಕೊಡುವುದಾಗಿ ಭರವಸೆ ನೀಡಿದರು.

ಶಿಕ್ಷಣದ ಜೊತೆಗೆ ಪ್ರತಿ ವಿದ್ಯಾರ್ಥಿಯ ಸಮತೋಲನ ಬೆಳವಣಿಗೆಗೆ ಸ್ಕೌಟ್ಸ್ ಹೆಚ್ಚು ಅಗತ್ಯತೆ ಇದೆ. ನಡತೆ, ಆರೋಗ್ಯ, ಪರಿಸರ, ಸೇವಾ ಮನೋಭಾವಗಳನ್ನು ಕಲಿಸಿಕೊಡುವ ಸ್ಕೌಟ್ಸ್, ಮಕ್ಕಳನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸುತ್ತದೆ ಎಂದು ಹೇಳಿದರು.

ದೇಶದ ಭವಿಷ್ಯ ರೂಪಿಸುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಇಂದು ಹೆಮ್ಮರವಾಗಿ ಬೆಳೆದಿದೆ. ಶಾಲಾ - ಕಾಲೇಜು, ವಿಶ್ವವಿದ್ಯಾನಿಲಯ ಅಟಿ, ಯೋಗ, ಧ್ಯಾನಕ್ಕೂ ಮಹತ್ವವನ್ನು ನೀಡಲಾಗಿದೆ ಹೇಳಿದರು.

ಭಾರತ್ ಸ್ಕೌಟ್ಸ್ ಮತ್ತು ಉಪಾಧ್ಯಕ್ಷೆ ತೇಜಸ್ವಿನಿ ಕುಮಾರ್ ಅವರು ಮಾತನಾ... ಸಂಘಜೀವಿಯಾಗಲು ಹಾಗ... ಬಗ್ಗೆ ಪಾಠ ಕಲಿಸಲು ನೆರವಾಗಿದೆ. ವಿದ್ಯಾರ್ಥಿಗ... ನಿರ್ಮಿತವಾದ ವಸ್ತುಗಳ... ಎಂದು ಮನವಿ ಮಾ...

ಭಾರತ್ ಸ್ಕೌಟ್ಸ್ ರಾಜ್ಯ ಮುಖ್ಯ ಆ... ಸಿಂಧ್ಯಾ ಅವರು,ಸ್ವ... ಕೈಗೊಂಡ ಸಮಾ... ಬಗ್ಗೆ ಮಾಹಿತಿ... ಸಮಾರಂಭದ... ಮತ್ತು ಗೈಡ್ಸ್‌ನ... ಬಿ. ಷಣ್ಮುಖಪ್ಪ ಮತ್ತುರಾಜ್ಯ... ಅವರು ಉ...

**ವಿವಿಧ ದಿನಪತ್ರಿಕೆಯಲ್ಲಿ ಪ್ರಕಟವಾದ ರಾಜ್ಯ ಪುರಸ್ಕಾರ ರ‍್ಯಾಲಿಯ ವರದಿಗಳು**

# సమాజసేవలో ముందుండాలి

**- యువతకు గవర్నర్ వాజుభాయ్ వాలా పిలుపు - స్కౌట్స్ అండ్ గైడ్స్ విద్యార్థులకు పురస్కారాల ప్రదాన.**

బెంగళూరు, జూన్ 25 (ఆంధ్రజ్యోతి ప్రతినిధి): బారత్ స్కౌట్స్ అండ్ గైడ్స్ రాజభవన్‌లోని గ్లాస్ హౌస్‌లో మంగళవారం ఏర్పాటు చేసిన కార్యక్రమంలో గవర్నర్ వాజుబాయ్ వాలా పలు పురస్కారాలను ప్రదానం చేశారు. ఉన్నత విద్యాశాఖ మంత్రి జి.టి.దేవేగౌడతో పాటు రాష్ట్ర స్కౌట్స్ అండ్ గైడ్స్ కమిషనర్ పిజిఆర్ సింధ్యా, కొండజ్జి షణ్ముఖప్ప, తేజస్విని అనంతకుమార్ అతిథులుగా పాల్గొన్నారు. విద్యార్థులనుద్దేశించి గవర్నర్ ప్రసంగిస్తూ సమాజ సేవలో విరివిగా పాల్గొనాలని యువతకు పిలుపునిచ్చారు.

సమాజంలో అనేక సమస్యలతో అమలవుతున్నవారు, నిరుపేదలు, రోగులు ఉన్నారని వీరి సేవకు కనీసం కొంత సమయమైనా కేటా...

THE BHARAT SCOUTS AND GUIDES, KARNATAKA

విజేతలకు బహుమతుల ప్రదానం చేస్తున్న గవర్నర్

# సమాజ సేవకు యువత నడుం బిగించాలి

శివాజీనగర:సమాజ సేవకు యువత నడుం బిగించి ఇబ్బందుల్లో ఉన్నవారిని ఆదుకోవాలని భారత్ స్కౌట్స్-గైడ్స్ విద్యార్థులకు గవర్నర్ వజుబాయి రుడావాలా పిలుపునిచ్చారు. రాజభవన్ గ్లాస్‌హౌస్ ఆవరణంలో స్కౌట్స్-గైడ్స్ ఏర్పాటు చేసిన కార్యక్రమంలో ఆయన పాల్గొని కప్స్ బుల్ బుల్స్ స్కౌట్స్-గైడ్స్ రోవర్, రేంజర్లకు చతుర్థ చరణ్ హీరక్ పంక్, రాష్ట్ర పురస్కార ధ్రువీకరణ పత్రాలను ప్రదానం చేసి మాట్లాడారు. సమాజంలో మంచి చెడ్డలపై దృష్టిసారించాలని, అంతర్జాతీయ స్థాయిలోనూ సేవలందించే మనోభావాన్ని పెంచుకోవాలని పిలుపునిచ్చారు. ఉన్నత విద్యాశాఖ మంత్రి... గౌడ మాట్లాడుతూ భారత్ స్కౌట్స్-గైడ్స్ ప్రభుత్వం నుంచి అన్ని సదుపాయాలను కల్పిస్తామని భరోసానిచ్చారు. స్కౌట్స్, గైడ్స్ సంస్థ సేవలు అన్నిచోట్లా అందుబాటులో ఉంటున్నాయన్నారు. భారత్... అనంతకుమార్ మాట్లాడుతూ స్కౌ... అండ్ గైడ్స్ ప్రతి ఒక్కరిలో సేవాభావా... నింపుతుందన్నారు. భారత్ స్కౌట్స్-గై... రాష్ట్ర ప్రధాన కమిషనర్ పీజీఆర్ సింధ... ఉపాధ్యక్షుడు కొండజ్జి షణ్మకప్ప, భార...

పురస్కారాలను ప్రదానం చేస్తున్న గవర్నర్ వజుబాయ్ వాలా

# ಸಮಾಜಮುಖಿ ಕೆಲಸ ಮಾಡಿ: ರಾಜ್ಯಪಾಲ

**ಬೆಂಗಳೂರು:** ಯುವ ಜನತೆ ಕೆಟ್ಟ ಹಾಗೂ ದುರಭ್ಯಾಸದತ್ತ ಗಮನ ಹರಿಸದೆ ಸಮಾಜಮುಖಿ ಸೇವೆ ಮಾಡುವತ್ತ ಗಮನ ಹರಿಸಬೇಕೆಂದು ರಾಜ್ಯಪಾಲ ವಿ.ಆರ್.ವಾಲಾ ತಿಳಿಸಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜಭವನದ ಗಾಜಿನ ಮನೆಯಲ್ಲಿ ಮಂಗಳವಾರ ಏರ್ಪಡಿಸಿದ್ದ ಕಬ್ಸ್, ಬುಲ್ ಬುಲ್ಸ್, ಸ್ಕೌಟ್ಸ್, ಗೈಡ್ಸ್, ರೋವರ್ಸ್ ಹಾಗೂ ರೇಂಜರ್ಸ್‌ಗಳಿಗೆ ಚತುರ್ಥ ಚರಣ್, ಹೀರಕ್ ಪಂಕ್ ಮತ್ತು ರಾಜ್ಯ ಪುರಸ್ಕಾರ ಪ್ರಮಾಣಪತ್ರ ಪ್ರದಾನ ಮಾಡಿ ಅವರು ಮಾತನಾಡಿದರು.

ಕೇವಲ ರಾಜ್ಯ ಮಾತ್ರವಲ್ಲ, ರಾಜ್ಯ, ರಾಷ್ಟ್ರ ಹಾಗೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಹ ಸೇವೆ ಮಾಡುವಂತಹ ಸಾಮರ್ಥ್ಯ ಬೆಳೆಸಿಕೊಂಡು ಸಮಾಜದಲ್ಲಿರುವ ನೊಂದವರ ಹಾಗೂ ಬಡವರ ಸೇವೆ ಮಾಡಿ ಎಂದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಘಟಕದ ಉಪಾಧ್ಯಕ್ಷ, ಉನ್ನತ ಶಿಕ್ಷಣ ಸಚಿವ ಜಿ.ಟಿ. ದೇವೇಗೌಡ ಮಾತನಾಡಿ, ವಿದ್ಯಾರ್ಥಿಗಳ ಸಮತೋಲನ ಬೆಳವಣಿಗೆಗೆ ಶಿಕ್ಷಣದ ಜತೆಗೆ ಸ್ಕೌಟ್ಸ್ ಮತ್ತು ಗೈಡ್ಸ್ ಸಹ ಅಗತ್ಯ ಇದು ಆರೋಗ್ಯ, ನಡವಳಿಕೆ, ಪರಿಸರ ಹಾಗೂ ಸೇವಾ ಮನೋಭಾವವನ್ನು ವಿದ್ಯಾರ್ಥಿಗಳು ಮೈಗೂಡಿಸಿಕೊಳ್ಳುವ ಪಾಠ ಹೇಳುತ್ತದೆ. ಉತ್ತಮ ಪ್ರಜೆಯನ್ನಾಗಿ ರೂಪಿಸುತ್ತದೆ ಎಂದು ತಿಳಿಸಿದರು.

ಉಪಾಧ್ಯಕ್ಷೆ ತೇಜಸ್ವಿನಿ ಅನಂತಕುಮಾರ್ ಮಾತನಾಡಿ, ಬದುಕುವುದನ್ನು ಸ್ಕೌಟ್ ಮನುಷ್ಯ ಸಂಘಜೀವಿಯಾಗಿ ಬದುಕುವುದ... ಹಾಗೂ ಪರಿಶ್ರಮದ ಪಾಠ ಕಲಿಸುತ್ತದೆ. ಪ್ಲಾಸ್ಟಿಕ್‌ನಿಂದ ತಯಾರಾಗುವ ವಸ್ತು ಬಳಸುವುದರಿಂದ ದೂರವಿರಿ ಎಂದು ವಿದ್ಯಾರ್ಥಿಗಳಿಗೆ ತಿಳಿಸಿದರು.

# ಸಮಾಜಮುಖಿಯಾಗಲಿ ಯುವಪೀಳಿಗೆ

ರಾಜಭವನದ ಗಾಜಿನ ಮನೆಯಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತುಗೈಡ್ಸ್ ವಿದ್ಯಾರ್ಥಿಗಳಿಗೆ ಪ್ರಶಸ್ತಿಗಳನ್ನು ನೀಡಲಾಯಿತು. ರಾಜ್ಯಪಾಲ ವಿ.ಆರ್.ವಾಲಾ, ಸಚಿವ ಜಿ.ಟಿ. ದೇವೇಗೌಡ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಪಾಧ್ಯಕ್ಷೆ ತೇಜಸ್ವಿ ಅನಂತಕುಮಾರ್, ರಾಜ್ಯಮುಖ್ಯ ಆಯುಕ್ತ ಪಿ.ಜಿ.ಆರ್. ಸಿಂಧ್ಯಾ ಉಪಸ್ಥಿತರಿದ್ದರು.

ಯುವಪೀಳಿಗೆ ಸಮಾಜಮುಖಿ ಕೆಲಸಗಳಲ್ಲಿ ತೊಡಗಿಸಿಕೊಂಡು ಉತ್ತಮ ಸಮಾಜ ಕಟ್ಟುವಲ್ಲಿ ಕಾರ್ಯೋನ್ಮುಖರಾಗಬೇಕೆಂದು ರಾಜ್ಯಪಾಲ ವಿ.ಆರ್. ವಾಲಾ ಅಭಿಪ್ರಾಯಪಟ್ಟರು.

ರಾಜಭವನದ ಗಾಜಿನ ಮನೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕರ್ನಾಟಕ ಘಟಕ ಆಯೋಜಿಸಿದ್ದ ಕಬ್ಸ್ ಬುಲ್‌ಬುಲ್ಸ್, ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್‌ಗಳಿಗೆ ಚತುರ್ಥ ಚರಣ್, ಹೀರಕ್ ಮತ್ತು ರಾಜ್ಯ ಪುರಸ್ಕಾರ ಪ್ರಮಾಣಪತ್ರಗಳ ಪ್ರದಾನ ಸಮಾರಂಭದಲ್ಲಿ ಮಾತನಾಡಿದ ಅವರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವಿಶ್ವದಲ್ಲೇ ಹೆಸರುವಾಸಿ. ಸಮಾಜಸೇವೆಯೇ ಇದರ ಮುಖ್ಯ ಕಾರ್ಯ. ಮಕ್ಕಳು ಹೆಚ್ಚೆಚ್ಚು ಇದರಲ್ಲಿ ತೊಡಗಿಸಿಕೊಳ್ಳಬೇಕು. ಕೇವಲ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಮಾತ್ರವಲ್ಲ, ಇಡೀ ಸಮಾಜದ ಯುವಜನಾಂಗ ಸಮಾಜಸೇವೆಯಲ್ಲಿ ತೊಡಗಬೇಕು. ಆಗಲೇ ಉತ್ತಮ ರಾಜ್ಯ, ರಾಷ್ಟ್ರ ನಿರ್ಮಾಣವಾಗಲು ಸಾಧ್ಯ ಎಂದು ತಿಳಿಸಿದರು.

ರಾಜ್ಯದಲ್ಲಿ ಬರಗಾಲ ಎದುರಾಗಿದೆ. ಜಾನುವಾರುಗಳಿಗೆ ಮೇವು, ನೀರು ಇಲ್ಲದಂತಾಗಿದೆ. ಬರಪರಿಹಾರಕ್ಕಾಗಿ ಏನು ಮಾಡಬೇಕು. ಯಾರ ಹತ್ತಿರ ಹೋಗಿ ನಮ್ಮ ಸಮಸ್ಯೆ ಹೇಳಬೇಕು.

ಇದಕ್ಕೆ ಹೇಗೆ ಪರಿಹಾರ ಕಂಡಿಕೊಳ್ಳಬೇಕು ಎಂದು ಯೋಚಿಸಬೇಕು. ಸಮಾಜದ ಆಗುಹೋಗುಗಳ ಕಡೆ ಗಮನಹರಿಸಬೇಕು. ಇವೆಲ್ಲವಕ್ಕೂ ಯುವಸಮುದಾಯ ಎಚ್ಚೆತ್ತುಕೊಂಡಾಗ ಮಾತ್ರ ಪರಿಹಾರ ಸಿಗಲು ಸಾಧ್ಯ.

> ... ರೋಗಿಗಳನ್ನು ಆರೈಕೆ ಮಾಡಬೇಕು. ... ಬದುಕಿನಲ್ಲಿ ಸಾರ್ಥಕತೆ ಸಿಗುತ್ತದೆ.
>
> -ವಿ.ಆರ್.ವಾಲಾ, ರಾಜ್ಯಪಾಲ

ಎಂದು ಹೇಳಿದರು.

ಉನ್ನತ ಶಿಕ್ಷಣ ಸಚಿವ ಜಿ.ಟಿ. ದೇವೇಗೌಡ ಮಾತನಾಡಿ, ದೇಶದ ಭವಿಷ್ಯ ರೂಪಿಸುವ ಸ್ಕೌಟ್ಸ್ ಮತ್ತು ಗೈಡ್ಸ್ ಇಂದು ಹೆಮ್ಮರವಾಗಿ ಬೆಳೆದಿದೆ. ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ಆಟ, ಯೋಗ, ಧ್ಯಾನ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ದೇಶಪ್ರೇಮ, ಶಿಸ್ತು, ಸೇವಾಮನೋಭಾವ, ... ಮನೋಭಾವವನ್ನು ಈ ಸಂಸ್ಥೆ ಹೇಳಿಕೊಡುತ್ತದೆ. ಈ ಸಂಸ್ಥೆಗೆ ಸರ್ಕಾರದಿಂದ ದೊರೆಯುವ ಸೌಲಭ್ಯಗಳನ್ನು ಒದಗಿಸಿಕೊಡುವುದಾಗಿ ಭರವಸೆ ನೀಡಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಪಾಧ್ಯಕ್ಷೆ ತೇಜಸ್ವಿ ಅನಂತಕುಮಾರ್ ಮಾತನಾಡಿ, ಮನುಷ್ಯ ಸಂಘಜೀವಿಯಾಗಲು, ಉತ್ತಮ ನಾಗರಿಕರಾಗಲು ಹಾಗೂ ಪರಿಶ್ರಮದ ಮಹತ್ವ ತಿಳಿಸಲು ಸ್ಕೌಟ್ಸ್ ಮತ್ತು ಗೈಡ್ಸ್ ನೆರವಾಗಿದೆ ಎಂದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತ ಪಿ.ಜಿ.ಆರ್.ಸಿಂಧ್ಯಾ, ಉಪಾಧ್ಯಕ್ಷ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಆಯುಕ್ತ ಎಂ.ಎ. ಖಾಲಿದ್ ಉಪಸ್ಥಿತರಿದ್ದರು.

ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ಜರುಗಿದ 'ವಿಶ್ವ ಪರಿಸರ ದಿನಾಚರಣೆ' ಪ್ರಯುಕ್ತ 'ಸಸಿ ನೆಡುವ ಕಾರ್ಯಕ್ರಮ' ಹಾಗೂ 'ಬೀಜದುಂಡೆ ತಯಾರಿಕೆ'ಯಲ್ಲಿ ತೊಡಗಿರುವ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ವಿವಿಧ ಪದಾಧಿಕಾರಿಗಳು ಹಾಗೂ ಗಣ್ಯವ್ಯಕ್ತಿಗಳು ಭಾಗವಹಿಸಿರುವುದು.


ಭಾಗಲಕೋಟೆ


ರಾಮನಗರ


ರಾಯಚೂರು


ಬೆಳಗಾವಿ


ಧಾರವಾಡ


ಶಿವಮೊಗ್ಗ


ಮಂಡ್ಯ


ಬೆಂಗಳೂರು ಉತ್ತರ


ಸಿರಸಿ

Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on every month of 28th or 30th (No. of Pages:

## “ಅಂತರಾಷ್ಟ್ರೀಯ ಯೋಗ ದಿನಾಚರಣೆ” ಪ್ರಯುಕ್ತ ವಿವಿಧ ಜಿಲ್ಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಮತ್ತು ರೋವರ್ಸ್-ರೇಂಜರ್ಸ್‌ಗಳು ಹಾಗೂ ಜಿಲ್ಲಾ ಪದಾಧಿಕಾರಿಗಳು ಯೋಗ ಕಾರ್ಯಕ್ರಮದಲ್ಲಿ ಪಾಲ್ಗೊಂಡಿರುವುದು


ಯಾದಗಿರಿ


ಮಧುಗಿರಿ


ದಾವಣಗೆರೆ


ದಕ್ಷಿಣ ಕನ್ನಡ


ಬೆಂಗಳೂರು ಗ್ರಾಮಾಂತರ


ಕೋಲಾರ



If not delivered, please return to :
THE EDITOR, Karnataka Scout & Guide
State Headquarters, Shanthi Gruha
#39, Palace Road, Bengaluru - 560 001
Ph.: 080-22260017, 22267470
e-mail.: shq@bsgkarnataka.org
shanthigruha@scout.org.in
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha** #39, Palace Road, Bengaluru - 560 001. **Publisher & Editor : K. Gangappa Gowda, Printed by : L. Lingappa**
**M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru 26